| | | | | | |
|---|---|---|---|---|---|
| 02 | ಪಶು ಸಂಗೋಪನೆ ಮತ್ತು ಮೀನುಗಾರಿಕೆ | ರಾಜಸ್ವ | 22,684.05 | 7.84 | 22,691.89 |
| | | ಬಂಡವಾಳ | 2,421.71 | - | 2,421.71 |
| 03 | ಆರ್ಥಿಕ | ರಾಜಸ್ವ | 1,84,186.68 | 10.97 | 1,84,197.65 |
| | | ಬಂಡವಾಳ | 342.21 | - | 342.21 |
| 04 | ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ | ರಾಜಸ್ವ | 12,329.27 | 2944.13 | 15,273.40 |
| | | ಬಂಡವಾಳ | - | - | - |
| 05 | ಒಳಾಡಳಿತ ಮತ್ತು ಸಾರಿಗೆ | ರಾಜಸ್ವ | 73,375.44 | - | 73,375.44 |
| | | ಬಂಡವಾಳ | 11,627.77 | - | 11,627.77 |
| 06 | ಮೂಲಭೂತ ಸೌಕರ್ಯ | ರಾಜಸ್ವ | 349.24 | - | 349.24 |
| | | ಬಂಡವಾಳ | 13,705.89 | - | 13,705.89 |
| 07 | ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತಿ ರಾಜ್ | ರಾಜಸ್ವ | 51,717.81 | - | 51,717.81 |
| | | ಬಂಡವಾಳ | 51,641.70 | - | 51,641.70 |
| 08 | ಅರಣ್ಯ, ಜೀವಿಶಾಸ್ತ್ರ ಮತ್ತು ಪರಿಸರ | ರಾಜಸ್ವ | 16,328.82 | 367.46 | 16,696.28 |
| | | ಬಂಡವಾಳ | 103.16 | - | 103.16 |
| 09 | ಸಹಕಾರ | ರಾಜಸ್ವ | 10,867.71 | - | 10,867.71 |
| | | ಬಂಡವಾಳ | 439.07 | - | 439.07 |
| 10 | ಸಮಾಜ ಕಲ್ಯಾಣ | ರಾಜಸ್ವ | 65,450.90 | - | 65,450.90 |
| | | ಬಂಡವಾಳ | 8,077.52 | - | 8077.52 |
| 11 | ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ | ರಾಜಸ್ವ | 52,330.13 | - | 52,330.13 |
| | | ಬಂಡವಾಳ | 2,379.30 | - | 2,379.30 |
| 12 | ವಾರ್ತಾ, ಪ್ರವಾಸೋದ್ಯಮ ಮತ್ತು ಯುವಜನ ಸೇವೆಗಳು | ರಾಜಸ್ವ | 6,846.13 | - | 6,846.13 |
| | | ಬಂಡವಾಳ | 3,663.00 | - | 3,663.00 |
| 13 | ಆಹಾರ ಮತ್ತು ನಾಗರೀಕ ಸರಬರಾಜು | ರಾಜಸ್ವ | 26,695.96 | 0.89 | 26,696.85 |
| | | ಬಂಡವಾಳ | 594.00 | - | 594.00 |
| 14 | ಕಂದಾಯ | ರಾಜಸ್ವ | 70,495.62 | 36.41 | 70,532.03 |
| | | ಬಂಡವಾಳ | 3,306.60 | - | 3,306.60 |

| | | | | | |
|---|---|---|---|---|---|
| 15 | ಮಾಹಿತಿ ತಂತ್ರಜ್ಞಾನ | ರಾಜಸ್ವ | 1,124.54 | - | 1,124.54 |
| | | ಬಂಡವಾಳ | 547.80 | - | 547.80 |
| 16 | ವಸತಿ | ರಾಜಸ್ವ | 24,358.51 | - | 24,358.51 |
| | | ಬಂಡವಾಳ | 8,289.35 | - | 8,289.35 |
| 17 | ಶಿಕ್ಷಣ | ರಾಜಸ್ವ | 2,87,161.97 | - | 2,87,161.97 |
| | | ಬಂಡವಾಳ | 8,610.74 | - | 8,610.74 |
| 18 | ವಾಣಿಜ್ಯ ಮತ್ತು ಕೈಗಾರಿಕೆ | ರಾಜಸ್ವ | 44,479.78 | 0.09 | 44,479.87 |
| | | ಬಂಡವಾಳ | 3,511.86 | - | 3,511.86 |
| 19 | ನಗರಾಭಿವೃದ್ಧಿ | ರಾಜಸ್ವ | 1,44,131.27 | - | 1,44,131.27 |
| | | ಬಂಡವಾಳ | 42,459.78 | - | 42,459.78 |
| 20 | ಲೋಕೋಪಯೋಗಿ | ರಾಜಸ್ವ | 43,107.95 | - | 43,107.95 |
| | | ಬಂಡವಾಳ | 79,058.76 | - | 79,058.76 |
| 21 | ಜಲ ಸಂಪನ್ಮೂಲ | ರಾಜಸ್ವ | 11,184.01 | - | 11,184.01 |
| | | ಬಂಡವಾಳ | 1,48,658.06 | - | 1,48,658.06 |
| 22 | ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು | ರಾಜಸ್ವ | 64,234.04 | - | 64,234.04 |
| | | ಬಂಡವಾಳ | 11,779.68 | - | 11,779.68 |
| 23 | ಕಾರ್ಮಿಕ | ರಾಜಸ್ವ | 11,970.03 | - | 11,970.03 |
| | | ಬಂಡವಾಳ | 99.00 | - | 99.00 |
| 24 | ಇಂಧನ | ರಾಜಸ್ವ | 80,500.42 | 62.70 | 80,563.12 |
| | | ಬಂಡವಾಳ | 25,146.00 | - | 25,146.00 |
| 25 | ಕನ್ನಡ ಮತ್ತು ಸಂಸ್ಕೃತಿ | ರಾಜಸ್ವ | 6,425.22 | - | 6,425.22 |
| | | ಬಂಡವಾಳ | 389.94 | - | 389.94 |
| 26 | ಯೋಜನೆ, ಸಾಂಖ್ಯಿಕ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ | ರಾಜಸ್ವ | 14,017.48 | - | 14,017.48 |
| | | ಬಂಡವಾಳ | - | - | - |
| 27 | ಕಾನೂನು | ರಾಜಸ್ವ | 8558.15 | - | 8,558.15 |
| | | ಬಂಡವಾಳ | - | - | - |

| | | | | | |
|---|---|---|---|---|---|
| 28 | ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ | ರಾಜಸ್ವ | 2,364.58 | 46.19 | 2,410.77 |
| | | ಬಂಡವಾಳ | - | - | - |
| 29 | ಋಣ ಮೇಲುಸ್ತುವಾರಿ | ರಾಜಸ್ವ | - | 1,84,074.00 | 1,84,074.00 |
| | | ಬಂಡವಾಳ | - | 1,17,292.17 | 1,17,292.17 |
| | | ಒಟ್ಟು | 18,21,063.05 | 3,04,850.67 | 21,25,913.72 |

**ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ**

2009–2010ನೇ ಹಣಕಾಸು ವರ್ಷದಲ್ಲಿ ಸಂದಾಯ ಮಾಡುವಾಗ ಒದಗಿಬರುವ ಹಲವಾರು ಖರ್ಚುಗಳನ್ನು ವಹಿಸುವುದಕ್ಕಾಗಿ ರಾಜ್ಯದ ಸಂಚಿತ ನಿಧಿಯೊಳಗಿನಿಂದ ವಿನಿಯೋಗಿಸಲು ಭಾರತ ಸಂವಿಧಾನದ 204ನೇ ಅನುಚ್ಛೇದದ ಉಪಬಂಧಗಳಿಗನುಸಾರವಾಗಿ ಈ ವಿಧೇಯಕವನ್ನು ಮಂಡಿಸಲಾಗಿದೆ.

**ಬಿ.ಎಸ್. ಯಡಿಯೂರಪ್ಪ**
ಮುಖ್ಯಮಂತ್ರಿಗಳು ಹಾಗೂ ಹಣಕಾಸು ಸಚಿವರು

**ಎಸ್.ಬಿ. ಪಾಟೀಲ್**
ಕಾರ್ಯದರ್ಶಿ, ಕರ್ನಾಟಕ ವಿಧಾನಸಭೆ

**THE KARNATAKA APPROPRIATION BILL, 2009**
**(L.A. Bill No. 19 of 2009)**

A Bill to authorize payment and appropriation of certain sums from and out of the Consolidated Fund of the State of Karnataka for the Services of the Financial Year 2009-2010.

Whereas it is expedient to authorize payment and appropriation of certain further sums from and out of the Consolidated Fund of the State for the services of the Financial Year 2009-2010.

Be it enacted by the Karnataka State Legislature in the Sixtieth Year of the Republic of India as follows :-

**1. Short Title :** This Act may be called the Karnataka Appropriation Act, 2009.

**2. Issue of Rupees 21,25,913.72 Lakhs out of the Consolidated Fund of the State of Karnataka for the Financial year 2009-2010.** From and out of the Consolidated Fund of the State of Karnataka, there may be paid and applied sums not exceeding those specified in column 5 of the Schedule amounting in the aggregate to the sum of **Rupees Twenty one thousand two hundred fifty nine crores thirteen lakhs seventy two thousand only** towards defraying the several charges which will come in the course of payment during the Financial Year 2009-2010 in respect of the services specified in column 2 of the Schedule.

**3. Appropriation :-** The sums authorized to be paid and applied from and out of the Consolidated Fund of the State by this Act shall be appropriated for the services and purposes expressed in the Schedule in relation to the said year.

**SCHEDULE**

*(See Sections 2 and 3)*

(Rs. in Lakhs)

| Demand No. | Service & Purpose | | Sums not exceeding: Voted by the Legislative Assembly | Charged on the Consoli dated Fund | Total |
|---|---|---|---|---|---|
| 1 | 2 | | 3 | 4 | 5 |
| 01 | Agriculture & Horticulture | Revenue | 56,109.47 | 7.82 | 56,117.29 |
| | | Capital | 825.00 | - | 825.00 |

| | | | | | |
|---|---|---|---|---|---|
| 02 | Animal Husbandry & Fisheries | Revenue | 22,684.05 | 7.84 | 22,691.89 |
| | | Capital | 2,421.71 | - | 2,421.71 |
| 03 | Finance | Revenue | 1,84,186.68 | 10.97 | 1,84,197.65 |
| | | Capital | 342.21 | - | 342.21 |
| 04 | Department of Personnel & Administrative Reforms | Revenue | 12,329.27 | 2,944.13 | 15,273.40 |
| | | Capital | - | - | - |
| 05 | Home and Transport | Revenue | 73,375.44 | - | 73,375.44 |
| | | Capital | 11,627.77 | - | 11,627.77 |
| 06 | Infrastructure Development | Revenue | 349.24 | - | 349.24 |
| | | Capital | 13,705.89 | - | 13,705.89 |
| 07 | Rural Development & Panchayat Raj | Revenue | 51,717.81 | - | 51,717.81 |
| | | Capital | 51,641.70 | - | 51,641.70 |
| 08 | Forest, Ecology & Environment | Revenue | 16,328.82 | 367.46 | 16,696.28 |
| | | Capital | 103.16 | - | 103.16 |
| 09 | Co-operation | Revenue | 10,867.71 | - | 10,867.71 |
| | | Capital | 439.07 | - | 439.07 |
| 10 | Social Welfare | Revenue | 65,450.90 | - | 65,450.90 |
| | | Capital | 8,077.52 | - | 8077.52 |
| 11 | Women & Child Development | Revenue | 52,330.13 | - | 52,330.13 |
| | | Capital | 2,379.30 | - | 2,379.30 |
| 12 | Information, Tourism & Youth Services | Revenue | 6,846.13 | - | 6,846.13 |
| | | Capital | 3,663.00 | - | 3,663.00 |
| 13 | Food and Civil Supplies | Revenue | 26,695.96 | 0.89 | 26,696.85 |
| | | Capital | 594.00 | - | 594.00 |
| 14 | Revenue | Revenue | 70,495.62 | 36.41 | 70,532.03 |
| | | Capital | 3,306.60 | - | 3,306.60 |
| 15 | Information Technology | Revenue | 1,124.54 | - | 1,124.54 |
| | | Capital | 547.80 | - | 547.80 |
| 16 | Housing | Revenue | 24,358.51 | - | 24,358.51 |
| | | Capital | 8,289.35 | - | 8,289.35 |
| 17 | Education | Revenue | 2,87,161.97 | - | 2,87,161.97 |
| | | Capital | 8,610.74 | - | 8,610.74 |

| | | | | | |
|---|---|---|---|---|---|
| 18 | Commerce & Industries | Revenue | 44,479.78 | 0.09 | 44,479.87 |
| | | Capital | 3,511.86 | - | 3,511.86 |
| 19 | Urban Development | Revenue | 1,44,131.27 | - | 1,44,131.27 |
| | | Capital | 42,459.78 | - | 42,459.78 |
| 20 | Public Works | Revenue | 43,107.95 | - | 43,107.95 |
| | | Capital | 79,058.76 | - | 79,058.76 |
| 21 | Water Resources | Revenue | 11,184.01 | - | 11,184.01 |
| | | Capital | 1,48,658.06 | - | 1,48,658.06 |
| 22 | Health and Family Welfare | Revenue | 64,234.04 | - | 64,234.04 |
| | | Capital | 11,779.68 | - | 11,779.68 |
| 23 | Labour | Revenue | 11,970.03 | - | 11,970.03 |
| | | Capital | 99.00 | - | 99.00 |
| 24 | Energy | Revenue | 80,500.42 | 62.70 | 80,563.12 |
| | | Capital | 25,146.00 | - | 25,146.00 |
| 25 | Kannada and Culture | Revenue | 6,425.22 | - | 6,425.22 |
| | | Capital | 389.94 | - | 389.94 |
| 26 | Planning, Statistics, Science & Technology | Revenue | 14,017.48 | - | 14,017.48 |
| | | Capital | - | - | - |
| 27 | Law | Revenue | 8558.15 | - | 8,558.15 |
| | | Capital | - | - | - |
| 28 | Parliamentary Affairs & Legislation | Revenue | 2,364.58 | 46.19 | 2,410.77 |
| | | Capital | - | - | - |
| 29 | Debt Servicing | Revenue | - | 1,84,074.00 | 1,84,074.00 |
| | | Capital | - | 1,17,292.17 | 1,17,292.17 |
| | Total | | 18,21,063.05 | 3,04,850.67 | 21,25,913.72 |

**STATEMENT OF OBJECTS AND REASONS**

This Bill is introduced in pursuance of the provisions of Article 204 of the Constitution of India to provide for the appropriation out of the Consolidated Fund of the State towards defraying the several charges which will come in course of payment during the Financial Year 2009-2010.

**B.S. YEDDYURAPPA**
Chief Minister and Minister for Finance

**S.B. PATIL**
Secretary, Karnataka Legislative Assembly

**S.B. PATIL**
Secretary, Karnataka Legislative Assembly

ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಶುಕ್ರವಾರ, ಫೆಬ್ರವರಿ ೨೭, ೨೦೦೯ (ಫಾಲ್ಗುಣ ೮, ಶಕ ವರ್ಷ ೧೯೩೦) | ನಂ. ೧೦೧ |
|---|---|---|

**KARNATAKA LEGISLATIVE ASSEMBLY SECRETARIAT**

**NOTIFICATION**

**No. KLAS/LGA/BLA/20/2009, Bangalore, Dated : 27th February, 2009**

The following Bill was introduced in Legislative Assembly on 27th February, 2009.

**THE KARNATAKA VALUE ADDED TAX ( AMENDMENT) BILL, 2009**
**(L.A. Bill No. 20 of 2009)**

**ಕರ್ನಾಟಕ ವಿಧಾನ ಸಭೆ**
**ಹದಿಮೂರನೇ ವಿಧಾನಸಭೆ**
**ಎರಡನೇ ಅಧಿವೇಶನ**
**(ಮುಂದುವರೆದ ಉಪವೇಶನಗಳು)**

**ಕರ್ನಾಟಕ ಮೌಲ್ಯವರ್ಧಿತ ತೆರಿಗೆ (ತಿದ್ದುಪಡಿ) ವಿಧೇಯಕ, 2009**
**(2009ರ ವಿಧಾನಸಭೆಯ ವಿಧೇಯಕ ಸಂಖ್ಯೆ 20)**

**ಕರ್ನಾಟಕ ಮೌಲ್ಯವರ್ಧಿತ ತೆರಿಗೆ ಅಧಿನಿಯಮ, 2003ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಒಂದು ವಿಧೇಯಕ.**

**ಇಲ್ಲಿ ಇನ್ನು ಮುಂದೆ ಕಂಡು ಬರುವ ಉದ್ದೇಶಗಳಿಗಾಗಿ ಕರ್ನಾಟಕ ಮೌಲ್ಯವರ್ಧಿತ ತೆರಿಗೆ ಅಧಿನಿಯಮ, 2003ನ್ನು (2004ರ ಕರ್ನಾಟಕ ಅಧಿನಿಯಮ 32) ಮತ್ತಷ್ಟು ತಿದ್ದುಪಡಿ ಮಾಡುವುದು ಯುಕ್ತವಾಗಿರುವುದರಿಂದ;**

ಇದು ಭಾರತ ಗಣರಾಜ್ಯದ ಅರವತ್ತನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನ ಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗತಕ್ಕದ್ದು:–

1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.– (1) **ಈ ಅಧಿನಿಯಮವನ್ನು ಕರ್ನಾಟಕ ಮೌಲ್ಯವರ್ಧಿತ ತೆರಿಗೆ (ತಿದ್ದುಪಡಿ) ಅಧಿನಿಯಮ, 2009 ಎಂದು ಕರೆಯತಕ್ಕದ್ದು.**

(2) ಇದು 2009ರ ಏಪ್ರಿಲ್ ತಿಂಗಳ ಒಂದನೇ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

**2. 2ನೇ ಪ್ರಕರಣದ ತಿದ್ದುಪಡಿ.–** ಕರ್ನಾಟಕ ಮೌಲ್ಯವರ್ಧಿತ ತೆರಿಗೆ ಅಧಿನಿಯಮ, 2003ರ (2004ರ ಕರ್ನಾಟಕ ಅಧಿನಿಯಮ 32)(ಇಲ್ಲಿ ಇನ್ನು ಮುಂದೆ ಮೂಲ ಅಧಿನಿಯಮವೆಂದು ಉಲ್ಲೇಖಿಸಲಾಗಿದೆ) 2ನೇ ಪ್ರಕರಣದ (13)ನೇ ಖಂಡದ ತರುವಾಯ ಈ ಮುಂದಿನ ಖಂಡವನ್ನು ಸೇರಿಸತಕ್ಕದ್ದು, ಎಂದರೆ:–

"(13–ಎ)"ವಿದ್ಯುನ್ಮಾನ ತೆರಿಗೆ ರಿಜಿಸ್ಟರ್" ಎಂದರೆ, ತೆರಿಗೆ ಬೆಲೆಪಟ್ಟಿಯ ನೀಡಿಕೆ ಅಥವಾ ಅಂಥ ಮಾರಾಟದ ಬಿಲ್ಲುಗಳನ್ನು ನೀಡಲು ಮತ್ತು ಅಂಥ ಮಾರಾಟದ ವಿವರಗಳನ್ನು ದಾಖಲಿಸುವ ಉದ್ದೇಶಕ್ಕಾಗಿ ಬಳಸಲಾದ ಒಂದು ಸುಭದ್ರ ಹಣಕಾಸು ವಿದ್ಯುನ್ಮಾನ ಸಾಧನ ಮತ್ತು ಇದು ಒಂದು ಮುದ್ರಣಯಂತ್ರ ಹಾಗೂ ವ್ಯಾಪಾರಿಯ ಅಥವಾ ಅವನ ಏಜಂಟನ ಸಹಿಯನ್ನು ಹಾಕಲು ಬಳಸುವ ಒಂದು ಯಂತ್ರ ಸಾಧನವನ್ನೂ ಒಳಗೊಳ್ಳುತ್ತದೆ.

**3. 11ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 11ನೇ ಪ್ರಕರಣದಲ್ಲಿ **"**ಮೇಲೆ ಕಡಿತವನ್ನು" ಎಂಬ ಪದಗಳಿಗೆ **"**ಸಂಬಂಧದಲ್ಲಿ ಕಡಿತ ಮಾದಲಾಗಿದೆಯೆಂದು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**4. 19ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 19ನೇ ಪ್ರಕರಣದಲ್ಲಿ,–

(1) ಶೀರ್ಷಿಕೆಯಲ್ಲಿ "ಬಳಕೆಯಲ್ಲಿಯ" ಎಂಬ ಪದದ ತರುವಾಯ "ಅಥವಾ ತೆರಿಗೆ ಸಂದಾಯದ ಯೋಜನೆಯ" ಎಂಬ ಪದಗಳನ್ನು ಸೇರಿಸತಕ್ಕದ್ದು.

(2) (2)ನೇ ಉಪ ಪ್ರಕರಣದ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"(3) ಯಾವೊಬ್ಬ ನೋಂದಾಯಿತ ವ್ಯಾಪಾರಿಯು ತನ್ನ ವ್ಯಾಪಾರ ಕ್ರಮದಲ್ಲಿ ಬಳಸಿಕೊಂಡ ಯಾವುದೇ ಸರಕುಗಳ ಮೇಲೆ ಹೂಡುವಳಿ ತೆರಿಗೆಯನ್ನು ಕಳೆದ ತರುವಾಯ 15ನೇ ಪ್ರಕರಣದ ಅಡಿಯಲ್ಲಿ ತೆರಿಗೆಯ ಬಗ್ಗೆ ರಾಜಿಯನ್ನು ಆಯ್ಕೆ ಮಾಡಿಕೊಂಡಲ್ಲಿ ವ್ಯಾಪಾರಿಯು ಹಾಗೆ ಆಯ್ಕೆ ಮಾಡಿಕೊಂಡ ದಿನಾಂಕದಂದು ಆತನ ದಾಸ್ತಾನಿನಲ್ಲಿ ಹೊಂದಿರುವ ಸರಕುಗಳ ಮೇಲೆ ಹಾಗೆ ಕಳೆದ ಹೂಡುವಳಿ ತೆರಿಗೆಯು ಅಂಥ ದಿನಾಂಕದ ನಂತರದ ತೆರಿಗೆಯ ಅವಧಿಯಲ್ಲಿ ಮರು ಸಂದಾಯ

ವಾಗಬಹುದಾಗಿರತಕ್ಕದ್ದು ಮತ್ತು ಹಾಗೆ ಮರು ಸಂದಾಯ ಮಾಡಬೇಕಾದ ಹೂಡುವಳಿ ತೆರಿಗೆಯನ್ನು ಅಂಥ ದಿನಾಂಕದಂದು ಅಂಥ ಸರಕುಗಳ ಮಾರುಕಟ್ಟೆ ಬೆಲೆಯ ಮೇಲೆ ಲೆಕ್ಕಹಾಕತಕ್ಕದ್ದು."

**5. 23ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 23ನೇ ಪ್ರಕರಣದಲ್ಲಿ "ಅರ್ಜಿಯನ್ನು ಸಲ್ಲಿಸಬಹುದು" ಎಂಬ ಪದಗಳ ತರುವಾಯ "ಮತ್ತು ಅಂಥ ವ್ಯಾಪಾರಿಯು 22ನೇ ಪ್ರಕರಣದ ಅಡಿಯಲ್ಲಿ ನೋಂದಣಿ ಮಾಡಿಸಿಕೊಳ್ಳಲು ಹೊಣೆಗಾರನಾದ ಮೇಲೆ ಹಾಗೆ ಅವನು ಹೊಣೆಗಾರನಾದ ದಿನಾಂಕದಂದು 13ನೇ ಪ್ರಕರಣದಲ್ಲಿ ನಿರ್ದಿಷ್ಟಪಡಿಸಿದ ಷರತ್ತುಗಳಿಗೆ ಒಳಪಟ್ಟು 11ನೇ ಪ್ರಕರಣದ ಅಡಿಯಲ್ಲಿ ನಿರ್ದಿಷ್ಟಪಡಿಸಿದ ಹೂಡುವಳಿ ತೆರಿಗೆಯನ್ನು ಕಳೆಯುವುದಕ್ಕೆ ಅರ್ಹನಾಗಿರತಕ್ಕದ್ದು" ಎಂಬ ಪದಗಳನ್ನು ಮತ್ತು ಅಂಕಿಗಳನ್ನು ಸೇರಿಸತಕ್ಕದ್ದು.

**6. 27ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 27ನೇ ಪ್ರಕರಣದ (1)ನೇ ಉಪ ಪ್ರಕರಣದಲ್ಲಿ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"ಪರಂತು ತೀರಿಹೋಗಿರುವ ವ್ಯಕ್ತಿಯ ಸಂದರ್ಭದಲ್ಲಿ ಆತನ ಕಾನೂನುಬದ್ಧ ವಾರಸುದಾರರು ನೋಂದಣಿಯ ವರ್ಗಾವಣೆಗಾಗಿ ಅರ್ಜಿಯನ್ನು ಹಾಕಿಕೊಂಡ ಮೇಲೆ ಮತ್ತು ನಿಯಮಿಸಬಹುದಾದಂಥ ಷರತ್ತುಗಳಿಗೆ ಒಳಪಟ್ಟು, ನಿಯಮಿಸಲಾದ ಪ್ರಾಧಿಕಾರವು ಅದನ್ನು ರದ್ದುಗೊಳಿಸುವ ಬದಲು ಆ ಕಾನೂನುಬದ್ಧ ವಾರಸುದಾರರಿಗೆ ನೋಂದಣಿ ಪ್ರಮಾಣಪತ್ರವನ್ನು ವರ್ಗಾಯಿಸಲು ಅನುಮತಿ ನೀಡಬಹುದು".

**7. 31ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 31ನೇ ಪ್ರಕರಣದಲ್ಲಿ,–

(1)(2)ನೇ ಉಪ ಪ್ರಕರಣದ ತರುವಾಯ ಈ ಮುಂದಿನ ಉಪ ಪ್ರಕರಣವನ್ನು ಸೇರಿಸತಕ್ಕದ್ದು, ಎಂದರೆ:–

"(2–ಎ) ಆಯುಕ್ತನು, ತಾನು ಅಧಿಸೂಚಿಸಬಹುದಾದ ವ್ಯಾಪಾರಿ ವರ್ಗಗಳಿಗೆ ಸೇರಿದ ಪ್ರತಿಯೊಬ್ಬ ನೋಂದಾಯಿತ ವ್ಯಾಪಾರಿಯು, ಅಂಥ ವ್ಯಾಪಾರಿಯ ತೆರಿಗೆ ಹೊಣೆಗಾರಿಕೆ ಮೇಲೆ ಪರಿಣಾಮ ಬೀರಬಹುದಾದ ಯಾವುದೇ ವಿಷಯ ಅಥವಾ ವ್ಯವಹಾರಗಳ ಸಂಬಂಧದಲ್ಲಿ ಮಾಹಿತಿಯನ್ನು ಪಡೆದುಕೊಳ್ಳುವುದನ್ನು ಸಾಧ್ಯವಾಗಿಸುವ ಉದ್ದೇಶದಿಂದ ನಿಯಮಿಸಬಹುದಾದಂಥ ವಿಧದ ಮತ್ತು ವಿವರಣೆಯ ಮತ್ತು ನಿಯಮಿಸಬಹುದಾದಂತೆ ಭದ್ರಗೊಳಿಸಬಹುದಾದಂಥ ಒಂದು ವಿದ್ಯುನ್ಮಾನ ತೆರಿಗೆ ರಿಜಿಸ್ಟರನ್ನು ಸ್ಥಾಪಿಸಬೇಕೆಂದು ಮತ್ತು ಬಳಸಬೇಕೆಂದು ಅಗತ್ಯಪಡಿಸಬಹುದು.

(2–ಬಿ) 29ನೇ ಪ್ರಕರಣದ (1) ರಿಂದ (3)ನೇ ಉಪಪ್ರಕರಣಗಳಲ್ಲಿ ಏನೇ ಇದ್ದರೂ, (2–ಎ) ಉಪಪ್ರಕರಣದ ಅಡಿಯಲ್ಲಿ ಬರುವ ಪ್ರತಿಯೊಬ್ಬ ನೋಂದಾಯಿತ ವ್ಯಾಪಾರಿಯು ಮಾರಾಟ ಮಾಡಿದ ಸರಕುಗಳ ಮೌಲ್ಯವು ಏನೇ ಇದ್ದರೂ ತೆರಿಗೆ ದರ ಪಟ್ಟಿಯನ್ನು ಅಥವಾ ಮಾರಾಟ ಬಿಲ್ಲುಗಳನ್ನು ವಿದ್ಯುನ್ಮಾನ ತೆರಿಗೆ ರಿಜಿಸ್ಟರ್ ಮೂಲಕ ನೀಡತಕ್ಕದ್ದು ಮತ್ತು ಅಂಥ ವ್ಯಾಪಾರಿಯು ವಿದ್ಯುನ್ಮಾನ ತೆರಿಗೆ ರಿಜಿಸ್ಟರಿನ ವೆಚ್ಚವನ್ನು ನಿಯಮಿಸಬಹುದಾದ ವಿಧಾನದಲ್ಲಿ ಮತ್ತು ಅಂಥ ಷರತ್ತುಗಳಿಗೆ ಒಳಪಟ್ಟು ವಸೂಲಿ ಮಾಡಿಕೊಳ್ಳಲು ಅನುಮತಿಸತಕ್ಕದ್ದು".

(2) (4)ನೇ ಉಪ ಪ್ರಕರಣದಲ್ಲಿ "ಯಾರ ತೆರಿಗೆ ಸಂದಾಯ ಮಾಡಬೇಕಾದ ವಹಿವಾಟು" ಎಂಬ ಪದಗಳಿಗೆ "ಯಾರ ಒಟ್ಟು ವಹಿವಾಟು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**8. 35ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 35ನೇ ಪ್ರಕರಣದ (1)ನೇ ಉಪ ಪ್ರಕರಣದಲ್ಲಿ "ಇಪ್ಪತ್ತು ದಿನಗಳೊಳಗೆ" ಎಂಬ ಪದಗಳ ತರುವಾಯ "ಅಥವಾ ಹದಿನೈದು ದಿನಗಳೊಳಗೆ" ಎಂಬ ಪದಗಳನ್ನು ಸೇರಿಸತಕ್ಕದ್ದು.

**9. 52ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 52ನೇ ಪ್ರಕರಣದಲ್ಲಿ,–

(1) (1)ನೇ ಉಪ ಪ್ರಕರಣದಲ್ಲಿ,

**(ಎ)** (ಬಿ) ಖಂಡದ ತರುವಾಯ ಈ ಮುಂದಿನ ಖಂಡವನ್ನು ಸೇರಿಸತಕ್ಕದ್ದು, ಎಂದರೆ:–

"(ಬಿ–1) ಅಂಥ ವ್ಯಾಪಾರಿಯು ವಿದ್ಯುನ್ಮಾನ ತೆರಿಗೆ ರಿಜಿಸ್ಟರನ್ನು ಪರಿಶೀಲನೆಗಾಗಿ ಹಾಜರುಪಡಿಸಲು ನಿರ್ದೇಶಿಸುವುದು;";

(ಬಿ)(ಇ) ಖಂಡದಲ್ಲಿ,

**(i)** "ರಿಜಿಸ್ಟರುಗಳು" ಎಂಬ ಪದದ ಮೊದಲು "ವಿದ್ಯುನ್ಮಾನ ತೆರಿಗೆ ರಿಜಿಸ್ಟರುಗಳು ಒಳಗೊಂಡಂತೆ" ಎಂಬ ಪದಗಳನ್ನು ಸೇರಿಸತಕ್ಕದ್ದು,

**(ii)** "ದಾಖಲೆಗಳು" ಎಂಬ ಪದಗಳಿಗೆ ಮೊದಲು "ವಿದ್ಯುನ್ಮಾನ ತೆರಿಗೆ ರಿಜಿಸ್ಟರುಗಳು ಒಳಗೊಂಡಂತೆ" ಎಂಬ ಪದಗಳನ್ನು ಸೇರಿಸತಕ್ಕದ್ದು,

(2) (1)ನೇ ಉಪ ಪ್ರಕರಣದ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"(1–ಎ) ಭಾರತದ ಲೆಕ್ಕನಿಯಂತ್ರಕರು ಮತ್ತು ಮಹಾ ಲೆಕ್ಕಪರಿಶೋಧಕರು ಪ್ರಾಧೀಕರಿಸಿದ ಲೆಕ್ಕಪರಿಶೋಧನಾ ಸಿಬ್ಬಂದಿ ತಂಡವು ಯಾವೊಬ್ಬ ನೋಂದಾಯಿತ ವ್ಯಾಪಾರಿಗೆ ತಾನು ನಿರ್ದಿಷ್ಟಪಡಿಸಬಹುದಾದಂಥ ಸಮಯ ಮತ್ತು ಸ್ಥಳದಲ್ಲಿ ಆತನ ವ್ಯವಹಾರದ ಚಟುವಟಿಕೆಗಳಿಗೆ ಸಂಬಂಧಪಟ್ಟ ಲೆಕ್ಕಪತ್ರಗಳು, ರಿಜಿಸ್ಟರುಗಳು, ವಿದ್ಯುನ್ಮಾನ ತೆರಿಗೆ ರಿಜಿಸ್ಟರುಗಳು ಮತ್ತು ದಸ್ತಾವೇಜುಗಳನ್ನು ಪರಿಶೀಲನೆಗಾಗಿ ಹಾಜರುಪಡಿಸಲು ನಿರ್ದೇಶನ ನೀಡುವ ಅಧಿಕಾರವನ್ನು ಹೊಂದಿರತಕ್ಕದ್ದು."

(3) (2)ನೇ ಉಪ ಪ್ರಕರಣದಲ್ಲಿ "(1)ನೇ ಉಪ ಪ್ರಕರಣದ ಅಡಿಯಲ್ಲಿ ಪ್ರಾಧಿಕೃತನಾದ ಅಧಿಕಾರಿಯು" ಎಂಬ ಆವರಣ ಚಿಹ್ನೆಗಳು, ಅಂಕೆ ಹಾಗೂ ಪದಗಳಿಗೆ "(1)ನೇ ಅಥವಾ (1–ಎ) ಉಪ ಪ್ರಕರಣಗಳ ಅಡಿಯಲ್ಲಿ ಪ್ರಾಧಿಕೃತನಾದ ಅಧಿಕಾರಿ ಅಥವಾ ಲೆಕ್ಕಪರಿಶೋಧನಾ ಸಿಬ್ಬಂದಿ ತಂಡವು" ಎಂಬ ಆವರಣ ಚಿಹ್ನೆಗಳು, ಅಂಕಿಗಳು ಹಾಗೂ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**10. 53ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 53 ಪ್ರಕರಣದಲ್ಲಿ, (2)ನೇ ಉಪಪ್ರಕರಣದ (ಬಿ) ಖಂಡದಲ್ಲಿ "ನಿಯಮಿಸಬಹುದಾದಂತೆ" ಎಂಬ ಪದದ ತರುವಾಯ "ಅಥವಾ ಆಯುಕ್ತರು ಅಧಿಸೂಚಿಸ ಬಹುದಾದಂತೆ" ಎಂಬ ಪದಗಳನ್ನು ಸೇರಿಸತಕ್ಕದ್ದು.

**11. 62ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 62ನೇ ಪ್ರಕರಣದಲ್ಲಿ, (6–ಎ) ಉಪಪ್ರಕರಣದ (ಬಿ) ಖಂಡಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(ii) ಅಪೀಲು ಪ್ರಾಧಿಕಾರವು ಪ್ರಕರಣದ ಸುನಾವಣೆಯು ಮುಕ್ತಾಯವಾದ ದಿನಾಂಕದಿಂದ ತೊಂಬತ್ತು ದಿನಗಳೊಳಗೆ ಅಪೀಲಿನ ವಿಲೆಯ ಆದೇಶವನ್ನು ಹೊರಡಿಸತಕ್ಕದ್ದು."

**12. 64ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 64ನೇ ಪ್ರಕರಣದ (3)ನೇ ಉಪ ಪ್ರಕರಣದಲ್ಲಿ ಈ ಮುಂದಿನ ಪರಂತುಕವನ್ನು ಸೇರಿಸತಕ್ಕದ್ದು, ಎಂದರೆ:–

"ಪರಂತು, 62ನೇ ಪ್ರಕರಣದ ಅಡಿಯಲ್ಲಿ ಅಪೀಲು ಪ್ರಾಧಿಕಾರವು ಕೋರಿದ ಅಪೀಲನ್ನು ಪೂರ್ಣವಾಗಿ ಅನುಮತಿಸಿದ ಆದೇಶವನ್ನು ಹೊರಡಿಸಿದ ಸಂದರ್ಭದಲ್ಲಿ (ಎ) ಖಂಡದಲ್ಲಿ ನಿರ್ದಿಷ್ಟಪಡಿಸಿದ ಷರತ್ತುಗಳು ಅನ್ವಯವಾಗತಕ್ಕದ್ದಲ್ಲ."

**13. 74ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 74ನೇ ಪ್ರಕರಣದ (4)ನೇ ಉಪ ಪ್ರಕರಣದಲ್ಲಿ "ದಂಡ ನೀಡಲು ತಪ್ಪುವುದು" ಎಂಬ ಪದಗಳಿಗೆ "ಪರಿಶೋಧಿತ ಲೆಕ್ಕ ಪತ್ರಗಳ ವಿವರ ಪತ್ರವನ್ನು ಸಲ್ಲಿಸುವ ವಿಫಲತೆಯು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು ಮತ್ತು ಯಾವಾಗಲೂ ಹಾಗೆ ಪ್ರತಿಯೋಜಿಸಲಾಗಿದೆಯೆಂದು ಭಾವಿಸತಕ್ಕದ್ದು.

**14. 77ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 77ನೇ ಪ್ರಕರಣದಲ್ಲಿ,

(1)ಶೀರ್ಷಿಕೆಯಲ್ಲಿ "ಮೊಹರುಗಳಿಗೆ" ಎಂಬ ಪದದ ತರುವಾಯ "ವಿದ್ಯುನ್ಮಾನ ತೆರಿಗೆ ರಿಜಿಸ್ಟರುಗಳಿಗೆ" ಎಂಬ ಅಲ್ಪವಿರಾಮ ಮತ್ತು ಪದಗಳನ್ನು ಸೇರಿಸತಕ್ಕದ್ದು.

(2) (1)ನೇ ಉಪಪ್ರಕರಣದ ತರುವಾಯ ಈ ಮುಂದಿನ ಉಪ ಪ್ರಕರಣವನ್ನು ಸೇರಿಸತಕ್ಕದ್ದು, ಎಂದರೆ:–

"(1–ಎ) 31ನೇ ಪ್ರಕರಣದ (2–ಎ) ಉಪ ಪ್ರಕರಣದ ಅಡಿಯಲ್ಲಿ ಬರುವ ಯಾವೊಬ್ಬ ನೋಂದಾಯಿತ ವ್ಯಾಪಾರಿಯು,–

(ಎ) ವಿದ್ಯುನ್ಮಾನ ತೆರಿಗೆ ರಿಜಿಸ್ಟರನ್ನು ಸ್ಥಾಪಿಸಲು ನಿರಾಕರಿಸಿದಲ್ಲಿ; ಅಥವಾ

(ಬಿ) ಸ್ಥಾಪಿತ ವಿದ್ಯುನ್ಮಾನ ರಿಜಿಸ್ಟರನ್ನು ಬಳಸಲು ನಿರಾಕರಿಸಿದರೆ ಅಥವಾ ವಿಫಲನಾದರೆ ; ಅಥವಾ

(ಸಿ) ಸ್ಥಾಪಿತವಾದ ಯಾವುದೇ ವಿದ್ಯುನ್ಮಾನ ತೆರಿಗೆ ರಿಜಿಸ್ಟರಿನ ಭದ್ರತೆಗಾಗಿ ಬಳಸಲಾದ ಮೊಹರನ್ನು ತೆಗೆದುಹಾಕಿದರೆ ಅಥವಾ ಯಾವುದೇ ರೀತಿಯಲ್ಲಿ ಹಸ್ತಕ್ಷೇಪ ಮಾಡಿದರೆ ಅಥವಾ ಸ್ಥಾಪಿತವಾದ ಯಾವುದೇ ವಿದ್ಯುನ್ಮಾನ ತೆರಿಗೆ ರಿಜಿಸ್ಟರನ್ನು ನಾಶಗೊಳಿಸಿದರೆ ಅಥವಾ ನಾಶಗೊಳಿಸಲು ಪ್ರಯತ್ನಿಸಿದರೆ,

–ಅಂಥ ವ್ಯಾಪಾರಿಯು, ಮೊದಲನೆ ದರ್ಜೆಯ ಮ್ಯಾಜಿಸ್ಟ್ರೇಟ್‌ರ ದರ್ಜೆಯ ನ್ಯಾಯಾಲಯಕ್ಕಿಂತ ಕಡಿಮೆಯಲ್ಲದ ದರ್ಜೆಯ ನ್ಯಾಯಾಲಯದಿಂದ ಅಪರಾಧ ನಿರ್ಣಯಕ್ಕೆ ಒಳಗಾದರೆ ಐದು ಸಾವಿರ ರೂಪಾಯಿಗಳಿಗೆ ಕಡಿಮೆಯಲ್ಲದ ಆದರೆ ಇಪ್ಪತ್ತೈದು ಸಾವಿರ ರೂಪಾಯಿಗಳಿಗೆ ಮೀರದ ಜುಲ್ಮಾನೆಗೆ ಮತ್ತು ಒಂದು ವರ್ಷಕ್ಕೆ ಮೀರದ ಅವಧಿಯ ಕಾರಾವಾಸಕ್ಕೆ ಒಳಗಾಗಲು ಬದ್ಧನಾಗಿರತಕ್ಕದ್ದು".

**ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ**

ಈ ಮುಂದಿನವುಗಳಿಗೆ ಉಪಬಂಧಗಳನ್ನು ಕಲ್ಪಿಸುವುದಕ್ಕಾಗಿ ಕರ್ನಾಟಕ ಮೌಲ್ಯವರ್ಧಿತ ತೆರಿಗೆ ಅಧಿನಿಯಮ, 2003ನ್ನು ತಿದ್ದುಪಡಿ ಮಾಡುವುದು ಅವಶ್ಯಕವೆಂದು ಪರಿಗಣಿಸಲಾಗಿದೆ.

(i) ಕೆಲವು ವರ್ಗದ ವ್ಯಾಪಾರಿಗಳು ತಮ್ಮ ಎಲ್ಲಾ ಮಾರಾಟಗಳ ಲೆಕ್ಕಗಳನ್ನು ಇಟ್ಟುಕೊಂಡು ಬರುವಂತೆ ಮತ್ತು ತೆರಿಗೆಯನ್ನು ಸರಿಯಾಗಿ ಸಂದಾಯ ಮಾಡುವಂತೆ ನೋಡಿಕೊಳ್ಳುವುದಕ್ಕಾಗಿ ಅವರುಗಳು ಹಸ್ತಕ್ಷೇಪ ಮಾಡಲಾಗದ (ಟ್ಯಾಂಪರ್ ಪ್ರೂಫ್) ವಿದ್ಯುನ್ಮಾನ ಬಿಲ್ಲು ನೀಡಿಕೆ ಯಂತ್ರಗಳನ್ನು ಉಪಯೋಗಿಸುವಂತೆ ಕಡ್ಡಾಯಗೊಳಿಸುವುದು;

(ii) ಭಾರತದ ಲೆಕ್ಕ ನಿಯಂತ್ರಕರು ಮತ್ತು ಮಹಾಲೆಕ್ಕ ಪರಿಶೋಧಕರು ಇವರು, ನೋಂದಾಯಿತ ವ್ಯಾಪಾರಿಗಳ ಲೆಕ್ಕಪತ್ರಗಳನ್ನು ಪರಿಶೀಲಿಸಲು ಮತ್ತು ಅಂಥ ವ್ಯಾಪಾರಿಗಳು ಸಲ್ಲಿಸಿದ ವಿವರಪಟ್ಟಿಕೆಗಳು ಸರಿಯಾಗಿದೆಯೆಂದು ಪರಿಶೀಲಿಸಲು ಲೆಕ್ಕ ಪರಿಶೋಧನಾ ಸಿಬ್ಬಂದಿ ತಂಡವನ್ನು ನಿಯೋಜಿಸುವುದಕ್ಕೆ ಅಧಿಕಾರವನ್ನು ನೀಡುವುದು;

(iii) ತೆರಿಗೆ ಸಂದಾಯದ ರಾಜಿ ಯೋಜನೆಯನ್ನು ಆಯ್ಕೆ ಮಾಡಿಕೊಂಡ ವ್ಯಾಪಾರಿಯು ತಾನು ಕಳೆದಿದ್ದ ಹೂಡುವಳಿ ತೆರಿಗೆಯನ್ನು ಮರು ಸಂದಾಯ ಮಾಡುವುದು;

(iv) ಸ್ವ-ಇಚ್ಛೆಯಿಂದ ನೋಂದಾಯಿತರಾದ ವ್ಯಾಪಾರಿಗಳ ತೆರಿಗೆ ವಿಧಿಸಬಹುದಾದ ಒಟ್ಟು ವಹಿವಾಟು ಕನಿಷ್ಠ ನೋಂದಾಯಿತ ಪರಿಮಿತಿಯನ್ನು ಮೀರಿದಾಗ ಹೂಡುವಳಿ ತೆರಿಗೆಯನ್ನು ಕಳೆಯಲು ಅವಕಾಶ ಕಲ್ಪಿಸಬಹುದು;

(v) ನಲ್ವತ್ತು ಲಕ್ಷವನ್ನು ಮೀರಿದ ಒಟ್ಟು ವಹಿವಾಟುವುಳ್ಳ ವ್ಯಾಪಾರಿಗಳ ಲೆಕ್ಕಪತ್ರಗಳನ್ನು ಪರಿಶೋಧಿಸುವುದು;

(vi) ಸರಕುಗಳ ಸಾಗಾಣಿಕೆಗಾಗಿ ತೆಗೆದುಕೊಂಡು ಹೋಗಬೇಕಾದ ದಾಖಲೆಗಳನ್ನು ಅಧಿಸೂಚಿಸುವುದಕ್ಕೆ ವಾಣಿಜ್ಯ ತೆರಿಗೆಗಳ ಆಯುಕ್ತರಿಗೆ ಅಧಿಕಾರವನ್ನು ನೀಡುವುದು;

(vii) ತೀರಿ ಹೋದ ವ್ಯಕ್ತಿಗೆ ನೀಡಿದ್ದ ನೋಂದಾಯಿತ ಪ್ರಮಾಣಪತ್ರವನ್ನು ಅವನ ಕಾನೂನು ಸಮ್ಮತ ವಾರಸುದಾರರಿಗೆ ವರ್ಗಾಯಿಸುವುದು;

(viii) ಅಪೀಲು ಪ್ರಾಧಿಕಾರವು ಅಪೀಲನ್ನು ವಿಲೆ ಮಾಡುವ ಆದೇಶವನ್ನು ಹೊರಡಿಸುವುದಕ್ಕೆ ಕಾಲಪರಿಮಿತಿಯನ್ನು ತೊಂಬತ್ತು ದಿನಗಳಿಗೆ ಹೆಚ್ಚಿಸುವುದು;

ಕೆಲವು ಆನುಷಂಗಿಕ ಮತ್ತು ಪ್ರಾಸಂಗಿಕ ತಿದ್ದುಪಡಿಗಳನ್ನು ಹಾಗೂ ಪ್ರಸ್ತುತ ಉಪಬಂಧಗಳನ್ನು ಸುವ್ಯವಸ್ಥೆಗೊಳಿಸುವುದಕ್ಕಾಗಿ ಕೆಲವೊಂದು ತಿದ್ದುಪಡಿಗಳನ್ನು ಸಹ ಮಾಡಲಾಗಿದೆ.

ಆದ್ದರಿಂದ ಈ ವಿಧೇಯಕ.

**ಆರ್ಥಿಕ ಜ್ಞಾಪನ ಪತ್ರ**

ಪ್ರಸ್ತಾವಿತ ಕ್ರಮವು ಯಾವುದೇ ಹೆಚ್ಚಿನ ವೆಚ್ಚವು ಒಳಗೊಂಡಿರುವುದಿಲ್ಲ.

**ಬಿ. ಎಸ್. ಯಡಿಯೂರಪ್ಪ**
ಮುಖ್ಯ ಮಂತ್ರಿಗಳು

**ಎಸ್.ಬಿ. ಪಾಟೀಲ್**
ಕಾರ್ಯದರ್ಶಿ, ಕರ್ನಾಟಕ ವಿಧಾನಸಭೆ

**ಪ್ರತ್ಯಾಯೋಜಿತ ಶಾಸನ ರಚನೆಗೆ ಸಂಬಂಧಿಸಿದ ಜ್ಞಾಪನ ಪತ್ರ**

**ಖಂಡ 6–** 6ನೇ ಖಂಡದ ಅಡಿಯಲ್ಲಿ ಸೇರಿಸಲು ಉದ್ದೇಶಿರುವ 27ನೇ ಪ್ರಕರಣದ (1)ನೇ ಉಪ ಪ್ರಕರಣದ ಪರಂತುಕವು ತೀರಿ ಹೋದ ವ್ಯಕ್ತಿಗೆ ನೀಡಿದ್ದ ನೋಂದಣಿ ಪ್ರಮಾಣಪತ್ರವನ್ನು ಆತನ ಕಾನೂನು ಸಮ್ಮತ ವಾರಸುದಾರರಿಗೆ ವರ್ಗಾಯಿಸುವುದಕ್ಕಾಗಿ ಷರತ್ತುಗಳನ್ನು ನಿಯಮಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ.

**ಖಂಡ 7–** 7ನೇ ಖಂಡದ ಅಡಿಯಲ್ಲಿ ಸೇರಿಸಲು ಉದ್ದೇಶಿಸಿರುವ 31ನೇ ಪ್ರಕರಣದ (2–ಎ) ಮತ್ತು (2–ಬಿ) ಉಪಪ್ರಕರಣಗಳು ತೆರಿಗೆ ಬೆಲೆಪಟ್ಟಿಗಳನ್ನು ಮತ್ತು ಮಾರಾಟದ ಬಿಲ್ಲುಗಳನ್ನು ನೀಡಲು ಹಾಗೂ ಅವುಗಳ ನೀಡಿಕೆಗಳನ್ನು ದಾಖಲಿಸಲು ವಿದ್ಯುನ್ಮಾನ ತೆರಿಗೆ ರಿಜಿಸ್ಟರುಗಳನ್ನು ಉಪಯೋಗಿಸುವಂತೆ ಅಗತ್ಯಪಡಿಸುವುದಕ್ಕಾಗಿ ನೋಂದಾಯಿತ ಮಾರಾಟಗಾರರ ವರ್ಗಗಳನ್ನು ಅಧಿಸೂಚಿಸಲು ವಾಣಿಜ್ಯ ತೆರಿಗೆಗಳ ಆಯುಕ್ತರಿಗೆ ಅಧಿಕಾರವನ್ನು ನೀಡುತ್ತದೆ ಮತ್ತು ಅಂಥ ವಿದ್ಯುನ್ಮಾನ ತೆರಿಗೆ ರಿಜಿಸ್ಟರುಗಳ ವಿಧ ಮತ್ತು ವಿವರಣೆಗಳನ್ನು ಹಾಗೂ ವಿದ್ಯುನ್ಮಾನ ತೆರಿಗೆ ರಿಜಿಸ್ಟರುಗಳನ್ನು ಪಡೆಯುವ ವಿಧಾನಗಳನ್ನು ನಿಯಮಿಸುವುದಕ್ಕಾಗಿ ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ.

**ಖಂಡ 9(2)–** 9(2)ನೇ ಖಂಡದ ಅಡಿಯಲ್ಲಿ ಸೇರಿಸಲು ಉದ್ದೇಶಿಸಿರುವ 52ನೇ ಪ್ರಕರಣದ (1–ಎ) ಉಪಪ್ರಕರಣವು ಭಾರತದ ಲೆಕ್ಕನಿಯಂತ್ರಕರು ಮತ್ತು ಮಹಾ ಲೆಕ್ಕಪರಿಶೋಧಕರು ನಿಯೋಜಿಸಿದ ಯಾವುದೇ ಲೆಕ್ಕಪರಿಶೋಧಕ ಸಿಬ್ಬಂದಿ ತಂಡವು ನೋಂದಾಯಿತ ವ್ಯಾಪಾರಿಯ ಲೆಕ್ಕಗಳನ್ನು ಪರಿಶೀಲಿಸಲು ಪ್ರಾಧಿಕರಿಸುವುದಕ್ಕೆ ಆತನಿಗೆ ಅಧಿಕಾರವನ್ನು ನೀಡುತ್ತದೆ.

**ಖಂಡ 11–** 11ನೇ ಖಂಡದ ಅಡಿಯಲ್ಲಿ ಸೇರಿಸಲು ಉದ್ದೇಶಿಸಿರುವ 62ನೇ ಪ್ರಕರಣದ (6–ಎ) ಉಪಪ್ರಕರಣದ (ii) ನೇ ಖಂಡವು ಮಾಲೀಕ ಅಥವಾ ಸರಕುಗಳ ವಾಹನ ಅಥವಾ ದೋಣಿ, ಹಡಗು ಅಥವಾ ಅಂತಹುದೇ ನೌಕೆಯ ಪ್ರಭಾರದಲ್ಲಿರುವ ವ್ಯಕ್ತಿಯು ಅಂಥ ಸರಕುಗಳ ವಾಹನ ಅಥವಾ ದೋಣಿ, ಹಡಗು ಅಥವಾ ಅಂತಹುದೇ ನೌಕೆಯಲ್ಲಿ ಸಾಗಿಸುವ ಸರಕುಗಳ ಸಂಬಂಧದಲ್ಲಿ ಹೊಂದಿರಬೇಕಾದ ದಾಖಲೆಗಳನ್ನು ಅಧಿಸೂಚಿಸಲು ವಾಣಿಜ್ಯ ತೆರಿಗೆಗಳ ಆಯುಕ್ತರಿಗೆ ಅಧಿಕಾರವನ್ನು ನೀಡುತ್ತದೆ.

ಪ್ರಸ್ತಾವಿತ ಶಾಸನ ರಚನಾ ಅಧಿಕಾರದ ಪ್ರತ್ಯಾಯೋಜನೆಯು ವಾಡಿಕೆಯ ಸ್ವರೂಪದ್ದಾಗಿದೆ.

## ಅನುಬಂಧ
## ಕರ್ನಾಟಕ ಮೌಲ್ಯವರ್ಧಿತ ತೆರಿಗೆ ಅಧಿನಿಯಮ, 2003ರ
## (2003ರ ಕರ್ನಾಟಕ ಅಧಿನಿಯಮ, 32) ಉದ್ಧೃತ ಭಾಗ.

XX XX XX

**2. ಪರಿಭಾಷೆಗಳು.–** ಈ ಅಧಿನಿಯಮದಲ್ಲಿ ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು,–

XX XX XX

(1) **'ಕೃಷಿ'** ಎಂಬುದು, ಅದರ ವ್ಯಾಕರಣ ವ್ಯತ್ಯಾಸಗಳೊಡನೆ, ತೋಟಗಾರಿಕೆ, ಬೆಳೆಗಳು, ಹುಲ್ಲು ಅಥವಾ ತೋಟದ ಉತ್ಪನ್ನಗಳನ್ನು ಬೆಳೆಸುವುದು ಮತ್ತು ಜಾನುವಾರುಗಳನ್ನು ಮೇಯಿಸುವುದನ್ನು ಒಳಗೊಳ್ಳುತ್ತದೆ, ಆದರೆ ಇದು ಹೈನುಗಾರಿಕೆ, ಕೋಳಿಸಾಕಣೆ, ತಳಿವರ್ಧನೆ ಮತ್ತು ಕೇವಲ ಮರ ಕಡಿಯುವುದನ್ನು ಒಳಗೊಳ್ಳುವುದಿಲ್ಲ;

XX XX XX

(13) 'ದಸ್ತಾವೇಜು' ಎಂಬುದು ಯಾವುದೇ ವಿಧಾನದಲ್ಲಿಯಾಗಲಿ ಲಿಖಿತವಾದ ಅಥವಾ ಮುದ್ರಿಸಿದ ದಾಖಲೆಗಳು, ಎಲೆಕ್ಟ್ರಾನಿಕ್ ವಿಧಾನದಲ್ಲಿ ರಕ್ಷಿಸಲಾದ (ಸ್ಟೋರ್ ಮಾಡಲಾದ) ಸ್ವಾಮ್ಯಪತ್ರ ಮತ್ತು ಮಾಹಿತಿ ಇವುಗಳನ್ನು ಒಳಗೊಳ್ಳುತ್ತದೆ.

XX XX XX

**11. ಹೂಡುವಳಿ ತೆರಿಗೆಯ ನಿರ್ಬಂಧಗಳು.–** (ಎ) ಈ ಮುಂದಿನವುಗಳ ಸಂಬಂಧದಲ್ಲಿ ಸಂದಾಯ ಮಾಡಬೇಕಾದ ನಿವ್ವಳ ತೆರಿಗೆಯನ್ನು ಲೆಕ್ಕಹಾಕುವಾಗ ಹೂಡುವಳಿ ತೆರಿಗೆಯನ್ನು ಕಡಿತಗೊಳಿಸತಕ್ಕದ್ದಲ್ಲ,–

XX XX XX

(ಸಿ) ಭಾಗಶ: ಅಥವಾ ಪೂರ್ಣವಾಗಿ ಕಾಮಗಾರಿ ಕರಾರುಗಳನ್ನು ತನಗಾಗಿ ನಿರ್ವಹಿಸಿದಕ್ಕೆ ಪ್ರತಿಫಲವಾಗಿ ಯಾವೊಬ್ಬ ಉಪಕರಾರುದಾರನಿಗೆ ಸಂದಾಯ ಮಾಡಿದ ಅಥವಾ ಸಂದಾಯ ಮಾಡತಕ್ಕ ಯಾವುದೇ ಮೊಬಲಗಿನ ಮೇಲೆ ಕಡಿತವನ್ನು ಕ್ಲೇಮು ಮಾಡುವ ಕಾಮಗಾರಿಗಳ ಕರಾರನ್ನು ನಿರ್ವಹಿಸುವ ಯಾವೊಬ್ಬ ವ್ಯಾಪಾರಿಯು ಹೂಡುವಳಿ ತೆರಿಗೆಯನ್ನು ಕಡಿತಗೊಳಿಸತಕ್ಕದ್ದಲ್ಲ.

XX XX XX

**19. ಹೂಡುವಳಿ ತೆರಿಗೆಯನ್ನು ಕಡಿತಗೊಳಿಸಿದ ತರುವಾಯ ಬಳಕೆಯಲ್ಲಿಯ ವ್ಯತ್ಯಾಸ.–** (1) ಯಾವೊಬ್ಬ ನೋಂದಾಯಿತ ವ್ಯಾಪಾರಿಯು ಯಾವುವೇ ಸರಕುಗಳ ಮೇಲೆ ಹೂಡುವಳಿ ತೆರಿಗೆಗಳನ್ನು ಕಡಿತಗೊಳಿಸಿದ್ದರೆ ಮತ್ತು ಆ ಸರಕುಗಳನ್ನು ತನ್ನ ವ್ಯಾಪಾರ ಕ್ರಮದಲ್ಲಿ ಬಳಸಿರದಿದ್ದರೆ ಅಥವಾ ಅವುಗಳು ಕಳೆದಿದ್ದರೆ ಅಥವಾ ಹಾನಿ ಹೊಂದಿದ್ದರೆ, ಕಡಿತಗೊಳಿಸಿದ ಹೂಡುವಳಿ ತೆರಿಗೆಯು ಆ ಸರಕುಗಳನ್ನು ಅಂಥ ಇತರ ಉಪಯೋಗಕ್ಕಾಗಿ ಬಳಸಿದ ದಿನಾಂಕದಿಂದ ಮುಂದಿನ ಅವಧಿಯಲ್ಲಿ ಮರುಸಂದಾಯ ಯೋಗ್ಯವಾಗುತ್ತದೆ.

(2) ಅಂಥ ಸರಕುಗಳನ್ನು ಬಳಕೆಯ ವ್ಯತ್ಯಾಸಕ್ಕೆ ಪೂರ್ವದಲ್ಲಿ ತೆರಿಗೆಗೆ ಗುರಿಯಾಗುವ ಸರಕುಗಳ ಮಾರಾಟದಲ್ಲಿ ಅಥವಾ ಭಾರತದ ಸರಹದ್ದಿನ ಹೊರಗೆ ರಫ್ತಿನ ಕ್ರಮದಲ್ಲಿ ಯಾವುವೇ ಸರಕುಗಳ ಮಾರಾಟದಲ್ಲಿ ಪೂರ್ಣವಾಗಿಯಾಗಲಿ ಅಥವಾ ಮುಖ್ಯವಾಗಿ ಉಪಯೋಗಿಸಿದ್ದರೆ ಅಥವಾ ಉಪಯೋಗಿಸಲು ಉದ್ದೇಶಿಸಿದ್ದರೆ, ಬಳಕೆಯ ವ್ಯತ್ಯಾಸದ ಸಮಯದಲ್ಲಿ ಅಂಥ ಸರಕುಗಳ ಪ್ರಚಲಿತ ಮಾರುಕಟ್ಟೆ ಮೌಲ್ಯದ ಮೇಲೆ ಮರುಸಂದಾಯ ಮಾಡಬೇಕಾದ ಹೂಡುವಳಿ ತೆರಿಗೆಯನ್ನು ಲೆಕ್ಕಹಾಕತಕ್ಕದ್ದು.

XX XX XX

**23. ಸ್ವಇಚ್ಛೆಯಿಂದ ನೋಂದಣಿ ಮಾಡಿಸುವುದು.**– 22ನೇ ಪ್ರಕರಣದ ಅಡಿಯಲ್ಲಿ ನೋಂದಾಯಿತನಾಗಲು ಬದ್ಧನಲ್ಲದಿದ್ದರೂ ತೆರಿಗೆಗೆ ಗುರಿಯಾಗುವ ಸರಕುಗಳನ್ನು ಮಾರಾಟ ಮಾಡುವ ಯಾವೊಬ್ಬ ವ್ಯಾಪಾರಿಯು ಸ್ವಇಚ್ಛೆಯಿಂದ ನೋಂದಣಿ ಮಾಡಲು ಬಯಸಿದರೆ ನಿಯಮಿಸಬಹುದಾದ ಅಂಥ ನಮೂನೆ ಮತ್ತು ಅಂಥ ವಿಧಾನದಲ್ಲಿ ಸರಿಯಾದ ಹಾಗೂ ಪೂರ್ಣ ವಿವರಗಳನ್ನು ನೀಡಿ ನಿಯಮಿಸಬಹುದಾದ ಪ್ರಾಧಿಕಾರಕ್ಕೆ ಅರ್ಜಿಯನ್ನು ಸಲ್ಲಿಸಬಹುದು.

XX XX XX

**27. ನೋಂದಣಿಯ ರದ್ದಿಯಾತಿ.**– (1) ಈ ಮುಂದಿನ ಯಾವುದೇ ಸಂದರ್ಭದಲ್ಲಿ ಎಂದರೆ,–

(ಎ) ಒಬ್ಬ ನೋಂದಾಯಿತ ವ್ಯಾಪಾರಿಯು ಯಾವುದೇ ವ್ಯಾಪಾರವನ್ನು ಮುಂದುವರೆಸದಿದ್ದಲ್ಲಿ, ಪೂರ್ಣವಾಗಿ ವರ್ಗಾಯಿಸಿದ್ದಲ್ಲಿ ಅಥವಾ ಅನ್ಯಥಾ ವಿಲೆ ಮಾಡಿದ್ದಲ್ಲಿ; ಅಥವಾ

(ಬಿ) ವ್ಯಾಪಾರದ ಮಾಲೀಕತ್ವದ ಸ್ಥಾನಮಾನದಲ್ಲಿ ಯಾವುದೇ ಬದಲಾವಣೆಯಾಗಿದ್ದಲ್ಲಿ; ಅಥವಾ

(ಸಿ) ನೋಂದಾಯಿತ ವ್ಯಾಪಾರಿಯ ಸರಕುಗಳ ಮಾರಾಟದ ತೆರಿಗೆಗೆ ಗುರಿಯಾಗತಕ್ಕ ವಹಿವಾಟು [1][ಹನ್ನೆರಡು ನಿರಂತರ ತಿಂಗಳುಗಳ][1] ಯಾವುದೇ ಅವಧಿಯಲ್ಲಿ ಎರಡು ಲಕ್ಷ ರೂಪಾಯಿಗಳನ್ನು ಮೀರದಿದ್ದಲ್ಲಿ; ಅಥವಾ

(ಡಿ) ಒಬ್ಬ ವ್ಯಾಪಾರಿಯು ಯಾವುದೇ ತೆರಿಗೆಗೆ ಗುರಿಯಾಗತಕ್ಕ ಮಾರಾಟವನ್ನು ಮಾಡದೆ ತೆರಿಗೆಯ ಬೆಲೆ ಪಟ್ಟಿಗಳನ್ನು ನೀಡಿದಲ್ಲಿ, ಅಥವಾ

(ಇ) ಈ ಅಧಿನಿಯಮದ ಅಡಿಯಲ್ಲಿ ನೋಂದಾಯಿತನಾದ ಒಬ್ಬ ವ್ಯಾಪಾರಿಯು ಮೃತನಾದಲ್ಲಿ,

– ಮತ್ತು ಯಾವುವೇ ಉಚಿತ ಮತ್ತು ಸಾಕಷ್ಟು ಕಾರಣಗಳಿದ್ದರೆ, ನಿಯಮಿಸಲಾದ ಪ್ರಾಧಿಕಾರವು, ತಾನಾಗಿಯೇ ಆಗಲಿ ಅಥವಾ ವ್ಯಾಪಾರಿಯು ನೀಡಿದ ಅರ್ಜಿಯ ಮೇಲಾಗಲಿ ಅಥವಾ ಮರಣದ ಸಂದರ್ಭದಲ್ಲಿ, ನಿಯಮಿಸಲಾದ ವಿಧಾನದಲ್ಲಿ ಕಾನೂನುಬದ್ಧ ವಾರಸುದಾರರ ಅರ್ಜಿಯ ಮೇಲಾಗಲಿ, ಸಂದರ್ಭದ ಪರಿಸ್ಥಿತಿಯನ್ನು ಗಮನದಲ್ಲಿರಿಸಿಕೊಂಡು ಯಾವುದೇ ಪೂರ್ವ ದಿನಾಂಕವನ್ನು ಒಳಗೊಂಡಂತೆ ತಾನು ಸೂಕ್ತವೆಂದು ಭಾವಿಸಬಹುದಾದ ಅಂಥ ದಿನಾಂಕದಿಂದ ನೋಂದಣಿ ಪ್ರಮಾಣ ಪತ್ರವನ್ನು ರದ್ದುಗೊಳಿಸಬಹುದು.

XX XX XX

**31. ಲೆಕ್ಕ ಪತ್ರಗಳು.**– (1) ಪ್ರತಿಯೊಬ್ಬ ನೋಂದಾಯಿತ ವ್ಯಾಪಾರಿಯು ಮತ್ತು ಈ ಅಧಿನಿಯಮದ ಅಡಿಯಲ್ಲಿ ತೆರಿಗೆ ಸಂದಾಯ ಮಾಡಲು ಬದ್ಧನಾದ ಪ್ರತಿಯೊಬ್ಬ ವ್ಯಾಪಾರಿಯು, ಸಂದಾಯ ಮಾಡಿದ ಹೂಡುವಳಿ ತೆರಿಗೆ ಮತ್ತು ಸಂದಾಯ ಮಾಡಬೇಕಾದ ಹುಟ್ಟುವಳಿ ತೆರಿಗೆಯೂ ಸೇರಿದಂತೆ ಈ ಅಧಿನಿಯಮದ ಅಡಿಯಲ್ಲಿ ತೆರಿಗೆಯ ಪ್ರತಿಯೊಂದು ದರಕ್ಕೆ ಒಳಪಟ್ಟ ಸರಕುಗಳ ಮೌಲ್ಯಗಳನ್ನು ತೋರಿಸುವ ತನ್ನ ಎಲ್ಲಾ ಖರೀದಿಗಳ, ಸ್ವೀಕೃತಿಗಳ, ಮಾರಾಟಗಳ, ಇತರ ವಿಲೆಗಳ, ಉತ್ಪಾದನೆಯ, ತಯಾರಿಕೆಯ ಮತ್ತು ದಾಸ್ತಾನಿನ ನಿಜವಾದ ಮತ್ತು ಸರಿಯಾದ ಲೆಕ್ಕ ಪತ್ರಗಳನ್ನು ಕನ್ನಡ ಅಥವಾ ಇಂಗ್ಲೀಷ್ ಅಥವಾ ಹಿಂದಿ ಅಥವಾ ಸರ್ಕಾರವು ಅಧಿಸೂಚನೆಯ ಮೂಲಕ ನಿರ್ದಿಷ್ಟಪಡಿಸಬಹುದಾದಂತೆ ಅಂಥ ಇತರ ಭಾಷೆಯಲ್ಲಿ ಇಡತಕ್ಕದ್ದು ಮತ್ತು ನಿರ್ವಹಿಸತಕ್ಕದ್ದು.

(2) ಯಾವೊಬ್ಬ ವ್ಯಾಪಾರಿಯು ಅಥವಾ ಯಾವುದೇ ವ್ಯಾಪಾರಿಗಳ ವರ್ಗವು ಇಟ್ಟುಕೊಂಡುಬಂದ ಮತ್ತು ನಿರ್ವಹಿಸಿದ ಲೆಕ್ಕ ಪತ್ರಗಳು, ಈ ಅಧಿನಿಯಮದ ಅಡಿಯಲ್ಲಿ ಅಗತ್ಯಪಡಿಸಲಾದ ವಿವರಪಟ್ಟಿಗಳನ್ನು ಪರಿಶೀಲಿಸಲು ಅಥವಾ ಅದರ ಅಡಿಯಲ್ಲಿ ಯಾವುದೇ ತೆರಿಗೆ ನಿರ್ಧರಣೆ ಮಾಡಲು ತನಗೆ ಅಥವಾ ಅದಕ್ಕೆ ಸಾಕಷ್ಟು ಅನುಕೂಲವಾಗಿಲ್ಲವೆಂದು ಆಯುಕ್ತನು ಅಥವಾ ನಿಯಮಿಸಲಾದ ಪ್ರಾಧಿಕಾರವು ಅಭಿಪ್ರಾಯಪಟ್ಟಲ್ಲಿ, ಅವನು ಅಥವಾ ಅದು, ಆದೇಶದ ಮೂಲಕ, ಯಾವೊಬ್ಬ ವ್ಯಾಪಾರಿ ಅಥವಾ ವ್ಯಾಪಾರಿಗಳ ವರ್ಗವನ್ನು, ಅವನು ಅಥವಾ ಅದು ನಿರ್ದೇಶಿಸಬಹುದಾದಂತೆ ಅಂಥ ನಮೂನೆಯಲ್ಲಿ ಮತ್ತು ಅಂಥ ರೀತಿಯಲ್ಲಿ ದಾಸ್ತಾನುಗಳ ತಯಾರಿಕೆ, ಮಾರಾಟಗಳ, ಖರೀದಿಗಳ, ವಿಲೆಗಳ ಅಥವಾ ಮಾರಾಟಗಳ ರೂಪದಲ್ಲಿ ಹೊರತು ಅನ್ಯಥಾ ವರ್ಗಾವಣೆಗಳ ದಾಖಲೆಗಳೂ ಒಳಗೊಂಡಂತೆ ತೆರಿಗೆ ಬೆಲೆಪಟ್ಟಿಯೂ ಸೇರಿದಂತೆ ಅಂಥ ಲೆಕ್ಕಪತ್ರಗಳನ್ನು ಮತ್ತು ದಾಖಲೆಗಳನ್ನು ಇಡಲು ಅಗತ್ಯಪಡಿಸಬಹುದು.

XX XX XX

(4) ಯಾರ ತೆರಿಗೆ ಸಂದಾಯ ಮಾಡಬೇಕಾದ ವಹಿವಾಟು ಒಂದು ವರ್ಷದಲ್ಲಿ ನಲವತ್ತು ಲಕ್ಷ ರೂಪಾಯಿಗಳನ್ನು ಮೀರುವುದೋ, ಆ ಪ್ರತಿಯೊಬ್ಬ ವ್ಯಾಪಾರಿಯು, ತನ್ನ ಲೆಕ್ಕಪತ್ರಗಳನ್ನು ನಿಯಮಿಸಬಹುದಾದಂಥ ಷರತ್ತುಗಳಿಗೆ ಮತ್ತು ಅಂಥ ಮಿತಿಗಳಿಗೆ ಒಳಪಟ್ಟು ಒಬ್ಬ ಚಾರ್ಟೆಡ್ ಅಕೌಂಟೆಂಟ್ ಅಥವಾ ಕಾಸ್ಟ್ ಅಕೌಂಟೆಂಟ್ ಅಥವಾ ಒಬ್ಬ ತೆರಿಗೆ ವೃತ್ತಿದಾರನಿಂದ ಪರಿಶೋಧಿಸತಕ್ಕದ್ದು ಮತ್ತು ಪರಿಶೋಧಿತ ಲೆಕ್ಕಪತ್ರಗಳ ವಿವರಣ ಪಟ್ಟಿಯ ಒಂದು ಪ್ರತಿಯನ್ನು ಮತ್ತು ನಿಯಮಿಸಲಾದ ದಸ್ತಾವೇಜುಗಳನ್ನು, ನಿಯಮಿಸಲಾದ ರೀತಿಯಲ್ಲಿ ನಿಯಮಿಸಲಾದ ಪ್ರಾಧಿಕಾರಕ್ಕೆ ಸಲ್ಲಿಸತಕ್ಕದ್ದು.

XX XX XX

**35. ವಿವರ ಪಟ್ಟಿಗಳು.**- (1) (2) ರಿಂದ (4)ನೇ ಉಪಪ್ರಕರಣಗಳಿಗೆ ಒಳಪಟ್ಟು ಪ್ರತಿಯೊಬ್ಬ ನೋಂದಾಯಿತ ವ್ಯಾಪಾರಿಯು ಮತ್ತು 9ನೇ ಪ್ರಕರಣದ (2)ನೇ ಉಪ-ಪ್ರಕರಣದ ಅಡಿಯಲ್ಲಿ ಸಂಗ್ರಹಿಸಲಾದ ತೆರಿಗೆ ಸಂದಾಯಕ್ಕೆ ಬದ್ಧವಾದ ಕೇಂದ್ರ ಸರ್ಕಾರ, ಒಂದು ರಾಜ್ಯ ಸರ್ಕಾರ, ಶಾಸನಬದ್ಧ ನಿಕಾಯ ಮತ್ತು ಒಂದು ಸ್ಥಳೀಯ ಪ್ರಾಧಿಕಾರವು ಎಲೆಕ್ಟ್ರಾನಿಕ್ ವಿಧಾನಗಳು ಸೇರಿದಂತೆ ಅಂಥ ನಮೂನೆಯಲ್ಲಿ ಮತ್ತು ವಿಧಾನದಲ್ಲಿ ಒಂದು ವಿವರ ಪಟ್ಟಿಯನ್ನು ಒದಗಿಸತಕ್ಕದ್ದು ಮತ್ತು ನಿಯಮಿಸಬಹುದಾದಂತೆ ಹಿಂದಿನ ತಿಂಗಳ ಕೊನೆಯ ತರುವಾಯದ ಇಪ್ಪತ್ತು ದಿನಗಳೊಳಗೆ ಅಥವಾ ಇತರೆ ಯಾವುದೇ ತೆರಿಗೆ ಅವಧಿಯೊಳಗೆ ಅಂಥ ವಿವರ ಪಟ್ಟಿಯ ಮೇಲೆ ಬಾಕಿ ಇರುವ ತೆರಿಗೆಯನ್ನು ಸಂದಾಯ ಮಾಡತಕ್ಕದ್ದು.

XX XX XX

**52. ದಸ್ತಾವೇಜುಗಳನ್ನು ಹಾಜರುಪಡಿಸುವುದು ಮತ್ತು ಪರಿಶೀಲಿಸುವುದು ಮತ್ತು ಪ್ರವೇಶ, ಶೋಧನೆ ಮತ್ತು ವಶಕ್ಕೆ ತೆಗೆದುಕೊಳ್ಳಲು ಅಧಿಕಾರಗಳು.**- (1) ಈ ಸಂಬಂಧದಲ್ಲಿ ಆಯುಕ್ತನು [1][ಈ ಕೆಳಗೆ ನಿರ್ದಿಷ್ಟಪಡಿಸಿರುವ ಎಲ್ಲ ಅಥವಾ ಯಾವುವೇ ಅಧಿಕಾರಗಳನ್ನು ಸಾಮಾನ್ಯವಾಗಿ ಅಥವಾ ನಿರ್ದಿಷ್ಟವಾಗಿ ಚಲಾಯಿಸಲು][1] ಪ್ರಾಧಿಕೃತಗೊಳಿಸಿದ ಯಾವೊಬ್ಬ ಅಧಿಕಾರಿಯು, ಈ ಮುಂದಿನ ಅಧಿಕಾರಗಳನ್ನು ಹೊಂದಿರತಕ್ಕದ್ದು,-

(ಎ) ಯಾವೊಬ್ಬ ವ್ಯಾಪಾರಿಯ ವ್ಯವಹಾರದ ಸ್ಥಳದಲ್ಲಿ ಅಥವಾ ಇತರ ಯಾವುದೇ ಸ್ಥಳದಲ್ಲಿ ಅಂಥ ವ್ಯವಹಾರವು ನಡೆಯುತ್ತಿದೆ ಎಂದು ಅಥವಾ ಅಂಥ ವ್ಯಾಪಾರಿಯು, ದಸ್ತಾವೇಜುಗಳೂ ಸೇರಿದಂತೆ ಲೆಕ್ಕಪತ್ರಗಳನ್ನು ಇಟ್ಟಿದ್ದಾನೆಂದು ಅಂಥ ಅಧಿಕಾರಿಯು ನಂಬಿದಲ್ಲಿ, ಅಂಥ ಸ್ಥಳವನ್ನು ಪ್ರವೇಶಿಸುವುದು ಮತ್ತು ಪರಿಶೀಲಿಸುವುದು;

(ಎ-1) ಅಂಥ ವ್ಯಾಪಾರಿಯು ತೆರಿಗೆ ದರಪಟ್ಟಿಗಳು ಅಥವಾ ಮಾರಾಟದ ಬಿಲ್ಲುಗಳನ್ನು ನೀಡುವುದನ್ನು ಪರೀಕ್ಷಿಸುವುದಕ್ಕಾಗಿ ಯಾವೊಬ್ಬ ವ್ಯಾಪಾರಿಯ ವ್ಯವಹಾರದ ಆವರಣದಿಂದ ತಾನು ಪ್ರಾಧಿಕರಿಸಿದ ಯಾವೊಬ್ಬ ವ್ಯಕ್ತಿಯು, ಯಾವುವೇ ಸರಕುಗಳ ಖರೀದಿ ಮಾಡುವಂತೆ ಮಾಡುವುದಕ್ಕೆ ಅಧಿಕಾರ ಹೊಂದಿರತಕ್ಕದ್ದು ಮತ್ತು ಅಂಥ ಅಧಿಕಾರಿಯು ಹಾಗೆ ಖರೀದಿಸಿದ ಸರಕುಗಳನ್ನು ಹಿಂದಿರುಗಿಸಿದ ಮೇಲೆ, ಅಂಥ ವ್ಯಾಪಾರಿಯು ಅಥವಾ ವ್ಯವಹಾರದ ಆವರಣಗಳ ಪ್ರಭಾರದಲ್ಲಿರುವ ಯಾವೊಬ್ಬ ವ್ಯಕ್ತಿಯು ತಾನು ನೀಡಿದ್ದ ಯಾವುದೇ ತೆರಿಗೆ ದರಪಟ್ಟಿ ಅಥವಾ ಮಾರಾಟದ ಬಿಲ್ಲನ್ನು ರದ್ದುಪಡಿಸಿ ಸರಕುಗಳಿಗಾಗಿ ಸಂದಾಯಮಾಡಿದ್ದ ಮೊಬಲಗನ್ನು ಮರುಪಾವತಿ ಮಾಡತಕ್ಕದ್ದು.

(ಬಿ) ಒಬ್ಬ ವ್ಯಾಪಾರಿಯ ವ್ಯವಹಾರದ ಕಾರ್ಯಚಟುವಟಿಕೆಗಳಿಗೆ ಸಂಬಂಧಿಸಿದಂತೆ ಲೆಕ್ಕಪತ್ರಗಳು, ರಿಜಿಸ್ಟರುಗಳು ಮತ್ತು ದಸ್ತಾವೇಜುಗಳನ್ನು, ಅಂಥ ಸಮಯದಲ್ಲಿ ಮತ್ತು ಅಂಥ ಸ್ಥಳದಲ್ಲಿ ಪರಿಶೀಲನೆಗಾಗಿ ಹಾಜರುಪಡಿಸುವಂತೆ ಅಂಥ ವ್ಯಾಪಾರಿಗೆ ನಿರ್ದೇಶಿಸುವುದು;

(ಸಿ) ವ್ಯಾಪಾರಿಯ ಸ್ವಾಧೀನತೆಯಲ್ಲಿರುವ ಅಥವಾ ಅಂಥ ವ್ಯಾಪಾರಿಯ ಪರವಾಗಿ ಇತರೆ ಯಾವೊಬ್ಬ ವ್ಯಕ್ತಿಯ ಸ್ವಾಧೀನತೆಯಲ್ಲಿರುವ ಅಂಥ ಸರಕುಗಳನ್ನು, ಎಲ್ಲೆಲ್ಲಿ ಇಡಲಾಗಿದೆಯೋ ಆ ಸ್ಥಳಗಳನ್ನು ಪ್ರವೇಶಿಸುವುದು ಮತ್ತು ಪರಿಶೀಲಿಸುವುದು;

(ಡಿ) ವ್ಯವಹಾರಗಳಿಗೆ ಸಂಬಂಧಪಟ್ಟಂತೆ ವಾಸ್ತವಾಂಶಗಳನ್ನು ಮುಚ್ಚಿಡಲಾಗಿದೆ ಎಂದು ಅನುಮಾನಬಂದಲ್ಲಿ, ವ್ಯಾಪಾರಿಯ ನಿವಾಸ ಸ್ಥಳವೂ ಒಳಗೊಂಡಂತೆ ವ್ಯಾಪಾರಿಯ ಅಥವಾ ಅಲ್ಲಿ ಇರುವ ವ್ಯಾಪಾರಿಯ ಪರವಾಗಿ ಕಾರ್ಯನಿರ್ವಹಿಸುತ್ತಿರುವ ವ್ಯಕ್ತಿಯ ಶೋಧನೆ ಮಾಡುವುದೂ ಸೇರಿದಂತೆ, ಅಂಥ ಸ್ಥಳಗಳನ್ನು ಪ್ರವೇಶಿಸುವುದು ಮತ್ತು ಪರಿಶೀಲಿಸುವುದು;

(ಇ) ಒಬ್ಬ ವ್ಯಾಪಾರಿಯು, ಯಾವುದೇ ರೀತಿಯಲ್ಲಿ ತೆರಿಗೆಯನ್ನು ತಪ್ಪಿಸುವ ಅಥವಾ ತೆರಿಗೆಯಿಂದ ನುಣುಚಿಕೊಳ್ಳುವ ಪ್ರಯತ್ನ ಮಾಡುತ್ತಿದ್ದಾನೆ ಅಥವಾ ತನ್ನ ತೆರಿಗೆ ಬದ್ಧತೆಯನ್ನು ಮರೆಮಾಚುತ್ತಿದ್ದಾನೆಂದು ಅನುಮಾನಿಸಲು ಕಾರಣಗಳಿದ್ದಲ್ಲಿ, ಅಂಥ ಕಾರಣಗಳನ್ನು ಲಿಖಿತದಲ್ಲಿ ದಾಖಲಿಸಿದ ತರುವಾಯ ವ್ಯಾಪಾರಿಯಿಂದ ಯಾವುವೇ ಲೆಕ್ಕಪತ್ರಗಳು, ರಿಜಿಸ್ಟರುಗಳು ಅಥವಾ ದಸ್ತಾವೇಜುಗಳನ್ನು ವಶಕ್ಕೆತೆಗೆದುಕೊಳ್ಳುವುದು ಮತ್ತು ಯಾರ ಅಭಿರಕ್ಷೆಯಿಂದ ಅಂಥ ಲೆಕ್ಕ ಪತ್ರಗಳು, ದಾಖಲೆಗಳು ಅಥವಾ ದಸ್ತಾವೇಜುಗಳನ್ನು ವಶಕ್ಕೆ ತೆಗೆದುಕೊಳ್ಳಲಾಗಿದೆಯೋ ಆ ವ್ಯಾಪಾರಿಗೆ ಅಥವಾ ಯಾವೊಬ್ಬ ಇತರ ವ್ಯಕ್ತಿಗೆ ಆ ಬಗ್ಗೆ ಸ್ವೀಕೃತಿ ಪತ್ರವನ್ನು ಮತ್ತು ಅವನು ಕೋರಿಕೊಂಡಲ್ಲಿ, ಅದರ ಪ್ರತಿಗಳನ್ನು ನೀಡತಕ್ಕದ್ದು ಮತ್ತು ತಾನು ಅವಶ್ಯಕವೆಂದು ಪರಿಗಣಿಸಬಹುದಾದ ಅಂಥ ಅವಧಿಯವರೆಗೆ ಪರಿಶೀಲನೆ, ವಿಚಾರಣೆ, ಪ್ರಾಷಿಕ್ಯೂಷನ್ ಅಥವಾ ಇತರ ಕಾನೂನು ವ್ಯವಹರಣೆಗಳಿಗಾಗಿ ಅವುಗಳನ್ನು ತನ್ನ ಅಭಿರಕ್ಷೆಯಲ್ಲಿ ಇಟ್ಟುಕೊಳ್ಳಬಹುದು.

XX XX XX

(2) ಮೇಲಿನ 31 ಮತ್ತು 33ನೇ ಪ್ರಕರಣಗಳ ಅಡಿಯಲ್ಲಿನ ದಾಖಲೆಗಳು ಮತ್ತು ಲೆಕ್ಕಪತ್ರಗಳನ್ನು ಎಲೆಕ್ಟ್ರಾನಿಕ್ ಉಪಕರಣಗಳ ಮೂಲಕ ನಿರ್ವಹಿಸಲಾಗಿದ್ದಲ್ಲಿ, ವ್ಯಾಪಾರಿಯು, ಅಂಥ ಲೆಕ್ಕ ಪತ್ರಗಳು ಮತ್ತು ದಾಖಲೆಗಳಿಗೆ ಸಂಬಂಧಿಸಿದಂತೆ ಮೇಲ್ಕಂಡ (1)ನೇ ಉಪ-ಪ್ರಕರಣದ ಅಡಿಯಲ್ಲಿ ಪ್ರಾಧಿಕೃತನಾದ ಅಧಿಕಾರಿಯು ಅಗತ್ಯಪಡಿಸಬಹುದಾದಂತೆ ಅವುಗಳನ್ನು ಪರಿಶೀಲಿಸಲು ಅವಕಾಶ ನೀಡತಕ್ಕದ್ದು.

XX XX XX

**53. ಚೆಕ್‌ಪೋಸ್ಟ್‌ಗಳ ಸ್ಥಾಪನೆ ಮತ್ತು ಸಾಗಣೆಯಲ್ಲಿರುವ ಸರಕುಗಳ ಪರಿಶೀಲನೆ.–** (1) ರಾಜ್ಯದಲ್ಲಿನ ಯಾವುದೇ ಸ್ಥಳ ಅಥವಾ ಸ್ಥಳಗಳಲ್ಲಿ, ಈ ಅಧಿನಿಯಮದ ಅಡಿಯಲ್ಲಿ ತೆರಿಗೆಯನ್ನು ತಪ್ಪಿಸುವುದನ್ನು ತಡೆಹಿಡಿಯುವ ಅಥವಾ ಪ್ರತಿಬಂಧಿಸುವ ದೃಷ್ಟಿಯಿಂದ ರಾಜ್ಯ ಸರ್ಕಾರ ಅಥವಾ ಆಯುಕ್ತನು ಅವಶ್ಯಕವೆಂದು ಪರಿಗಣಿಸಿದಲ್ಲಿ ಅದು ಅಥವಾ ಅವನು, ಅಧಿಸೂಚಿಸಬಹುದಾದಂತೆ ಅಂಥ ಸ್ಥಳ ಅಥವಾ ಸ್ಥಳಗಳಲ್ಲಿ ಚೆಕ್‌ಪೋಸ್ಟ್‌ನ್ನು ಅಥವಾ ಸುಂಕದ ಕಟ್ಟೆಯನ್ನು ಅಥವಾ ಅವೆರಡನ್ನು ಸ್ಥಾಪಿಸುವಂತೆ ಅಧಿಸೂಚನೆಯ ಮೂಲಕ, ನಿರ್ದೇಶಿಸಬಹುದು.

(2) ಒಂದು ಸರಕು ವಾಹನ ಅಥವಾ ನಾವೆ, ಹಡಗು ಅಥವಾ ಅಂಥದೇ ನೌಕೆಯ ಮಾಲೀಕ ಅಥವಾ ಪ್ರಭಾರ ಹೊಂದಿದ ವ್ಯಕ್ತಿಯು,–

(ಎ) ತನ್ನ ಜೊತೆಯಲ್ಲಿ ಸಂದರ್ಭಾನುಸಾರ ಸರಕು ವಾಹನದ ದಾಖಲೆ, ಟ್ರಿಪ್‌ಶೀಟ್ ಅಥವಾ ಲಾಗ್ ಪುಸ್ತಕವನ್ನು ಒಯ್ಯತಕ್ಕದ್ದು; ಮತ್ತು

(ಬಿ) ಸರಕುಗಳ ವಾಹನ ಅಥವಾ ನಾವೆ, ಹಡಗು ಅಥವಾ ಅಂಥದೇ ನೌಕೆಯಲ್ಲಿ ಸಾಗಿಸುತ್ತಿರುವ ಸರಕುಗಳಿಗೆ ಸಂಬಂಧಪಟ್ಟಂತೆ, ನಿಯಮಿಸಬಹುದಾದಂಥ ದಸ್ತಾವೇಜುಗಳನ್ನು ತನ್ನ ಜೊತೆಯಲ್ಲಿ ತೆಗೆದುಕೊಂಡು ಒಯ್ಯತಕ್ಕದ್ದು; ಮತ್ತು

XX XX XX

**62. ಅಪೀಲುಗಳು.–** (1) ನಿಯಮಿಸಲಾದ ಪ್ರಾಧಿಕಾರವು ಈ ಅಧಿನಿಯಮದ ಉಪಬಂಧಗಳ ಅಡಿಯಲ್ಲಿ ಹೊರಡಿಸಿದ ಯಾವುದೇ ಆದೇಶದಿಂದ ಅಥವಾ ವ್ಯವಹರಣೆಗಳಿಂದ ಬಾಧಿತನಾದ ಯಾವೊಬ್ಬ ವ್ಯಕ್ತಿಯು, ಅವುಗಳನ್ನು ಆಕ್ಷೇಪಿಸಿ ಅಪೀಲು ಪ್ರಾಧಿಕಾರಕ್ಕೆ ಅಪೀಲು ಮಾಡಿಕೊಳ್ಳಬಹುದು.

XX XX XX

(6–ಎ) (i) ಅಪೀಲು ಪ್ರಾಧಿಕಾರವು, ತನ್ನ ಮುಂದಿರುವ ಅಪೀಲನ್ನು ವಿಲೆ ಮಾಡುವಾಗ ತೆರಿಗೆ ನಿರ್ಧರಣೆ ಮಾಡಲು ಅಥವಾ ಹೊಸದಾಗಿ ಆದೇಶವನ್ನು ಮಾಡಲು ಪುನರ್ ವಿಚಾರಣೆಗಾಗಿ ಪ್ರಕರಣವನ್ನು ವಾಪಸು ಕಳುಹಿಸತಕ್ಕದ್ದಲ್ಲ. ಆದರೆ, ಅಪೀಲನ್ನು ಅದರ ಗುಣ–ದೋಷಗಳ ಮೇಲೆ, ಹೆಚ್ಚಿನ ಸಾಕ್ಷ್ಯವನ್ನು ತೆಗೆದುಕೊಳ್ಳುವುದು ಅವಶ್ಯಕವಾಗಿದ್ದರೆ ಅದನ್ನು ತೆಗೆದುಕೊಂಡು ತಾನು ಸೂಕ್ತವೆಂದು ಭಾವಿಸುವಂತೆ ವಿಲೆ ಮಾಡಲು ಮುಂದುವರಿಯತಕ್ಕದ್ದು.

(ii) ಅಪೀಲು ಪ್ರಾಧಿಕಾರವು, ಪ್ರಕರಣದ ಸುನಾವಣೆಯು ಮುಕ್ತಾಯವಾದ ದಿನಾಂಕದಿಂದ ಮೂವತ್ತು ದಿನಗಳ ಅವಧಿಯೊಳಗೆ ಅಪೀಲನ್ನು ವಿಲೆ ಮಾಡಿ ಆದೇಶವನ್ನು ಹೊರಡಿಸತಕ್ಕದ್ದು ಮತ್ತು ಪ್ರಕರಣದ ಅಸಾಧಾರಣ ಮತ್ತು ವಿಶೇಷ ಸನ್ನಿವೇಶಗಳ ಕಾರಣಗಳಿಂದಾಗಿ ಹಾಗೆ ಮಾಡುವುದು ಕಾರ್ಯಸಾಧ್ಯವಾಗದಿದ್ದಲ್ಲಿ, ಅಪೀಲು ಪ್ರಾಧಿಕಾರಿಯು, ಆದೇಶ ಹೊರಡಿಸುವುದಕ್ಕಾಗಿ ಮುಂದಿನ ಒಂದು ದಿನಾಂಕವನ್ನು ನಿಗದಿಪಡಿಸತಕ್ಕದ್ದು ಮತ್ತು ಅಂಥ ದಿನಾಂಕವು ಪ್ರಕರಣದ ಸುನಾವಣೆಯು ಮುಕ್ತಾಯಗೊಂಡ ದಿನದಿಂದ ಅರವತ್ತು ದಿನಗಳಿಗೆ ಮೀರದ ದಿನಾಂಕವಾಗಿರತಕ್ಕದ್ದು ಮತ್ತು ಹಾಗೆ ನಿಗದಿಪಡಿಸಲಾದ ದಿನದ ಬಗ್ಗೆ ಅಪೀಲುದಾರನಿಗೆ ಸೂಕ್ತ ನೋಟೀಸನ್ನು ನೀಡತಕ್ಕದ್ದು.]

XX XX XX

**64. ಅಪರ ಆಯುಕ್ತರ ಮತ್ತು ಆಯುಕ್ತನ ಪುನರೀಕ್ಷಣಾ ಅಧಿಕಾರಗಳು.–** (1) ಅಪರ ಆಯುಕ್ತನು, ಈ ಅಧಿನಿಯಮದ ಅಡಿಯಲ್ಲಿ ಮಾಡಿದ ಯಾವುವೇ ಆದೇಶಗಳ ದಾಖಲೆಗಳನ್ನು ಅಥವಾ ದಾಖಲು ಮಾಡಿದ ವ್ಯವಹರಣೆಗಳನ್ನು ತಾನೇ ಸ್ವತಃ ತರಿಸಿಕೊಳ್ಳಬಹುದು ಮತ್ತು ಪರೀಕ್ಷಿಸಬಹುದು ಮತ್ತು ಅದರಲ್ಲಿ ಜಂಟಿ ಆಯುಕ್ತರ ದರ್ಜೆಗೆ ಮೇಲಿನದಲ್ಲದ ದರ್ಜೆಯ ಯಾವೊಬ್ಬ ಅಧಿಕಾರಿಯು ಮಾಡಿದ ಯಾವುದೇ ಆದೇಶವು ರಾಜಸ್ವದ ಹಿತಾಸಕ್ತಿಗೆ ಪ್ರತಿಕೂಲವಾಗಿರುವಷ್ಟರ ಮಟ್ಟಿಗೆ ದೋಷಪೂರ್ಣವಾಗಿದೆಯೆಂದು ಆತನು ಪರಿಗಣಿಸಿದರೆ, ಆತನು ಅವಶ್ಯವಿದ್ದಲ್ಲಿ ತಾನು ಸೂಕ್ತವೆಂದು ಭಾವಿಸಬಹುದಾದ ಅಂಥ ಅವಧಿಯವರೆಗೆ ಅಂಥ ಆದೇಶದ ಜಾರಿಯನ್ನು ತಡೆಹಿಡಿಯಬಹುದು ಮತ್ತು ಸಂಬಂಧಪಟ್ಟ ವ್ಯಕ್ತಿಗೆ ಅಹವಾಲು ಹೇಳಿಕೊಳ್ಳಲು ಒಂದು ಅವಕಾಶವನ್ನು ಕೊಟ್ಟ ತರುವಾಯ ಮತ್ತು ತಾನು ಸೂಕ್ತವೆಂದು ಭಾವಿಸಬಹುದಾದ ಅಂಥ ವಿಚಾರಣೆಯನ್ನು ಮಾಡಿದ ತರುವಾಯ ಅಥವಾ ಮಾಡಿಸಿದ ತರುವಾಯ ತೆರಿಗೆಯ ನಿರ್ಧರಣೆಯನ್ನು ಹೆಚ್ಚಿಸುವ ಅಥವಾ ಮಾರ್ಪಡಿಸುವ ಅಥವಾ ತೆರಿಗೆ ನಿರ್ಧರಣೆಯನ್ನು ರದ್ದುಗೊಳಿಸುವ ಅಥವಾ ಹೊಸದಾಗಿ ತೆರಿಗೆ ನಿರ್ಧರಣೆಯನ್ನು ನಿರ್ದೇಶಿಸುವ ಆದೇಶವೂ ಒಳಗೊಂಡಂತೆ ಆ ಪ್ರಕರಣದ ಸನ್ನಿವೇಶಗಳಿಗೆ ಸಮರ್ಥನೀಯವಾಗುವಂತೆ ಅದರ ಬಗ್ಗೆ ಅಂಥ ಆದೇಶವನ್ನು ಹೊರಡಿಸಬಹುದು.

(2) ಆಯುಕ್ತನು, ಈ ಅಧಿನಿಯಮದ ಅಡಿಯಲ್ಲಿನ ಯಾವುದೇ ವ್ಯವಹರಣೆಯ ದಾಖಲೆಯನ್ನು ತಾನೇ ಸ್ವತಃ ತರಿಸಿಕೊಳ್ಳಬಹುದು ಮತ್ತು ಪರೀಕ್ಷಿಸಬಹುದು ಹಾಗೂ ತನಗೆ ಅಧೀನನಾದ ಯಾವೊಬ್ಬ ಅಧಿಕಾರಿಯು, ಅಥವಾ 60ನೇ ಪ್ರಕರಣದ ಅಡಿಯಲ್ಲಿ ರಚಿತವಾದ ಸ್ಪಷ್ಟೀಕರಣ ಮತ್ತು ಪೂರ್ವಭಾವಿ ನಿರ್ಣಯಗಳ ಪ್ರಾಧಿಕಾರವು ಆ ಬಗ್ಗೆ ಹೊರಡಿಸಿದ ಯಾವುದೇ ಆದೇಶವು ರಾಜಸ್ವದ ಹಿತಾಸಕ್ತಿಗಳಿಗೆ ಪ್ರತಿಕೂಲವಾಗಿರುವಷ್ಟರ ಮಟ್ಟಿಗೆ ದೋಷಪೂರ್ಣವಾಗಿದೆಯೆಂದು ಆತನು ಪರಿಗಣಿಸಿದರೆ, ಆತನು ಅವಶ್ಯವಿದ್ದಲ್ಲಿ, ತಾನು ಸೂಕ್ತವೆಂದು ಭಾವಿಸಬಹುದಾದ ಅಂಥ ಅವಧಿಯವರೆಗೆ, ಅಂಥ ಆದೇಶದ ಜಾರಿಯನ್ನು ತಡೆಹಿಡಿಯಬಹುದು ಮತ್ತು ಸಂಬಂಧಪಟ್ಟ ವ್ಯಕ್ತಿಗೆ ಅಹವಾಲನ್ನು ಹೇಳಿಕೊಳ್ಳಲು ಒಂದು ಅವಕಾಶವನ್ನು ಕೊಟ್ಟತರುವಾಯ ಮತ್ತು ತಾನು ಸೂಕ್ತವೆಂದು ಭಾವಿಸಬಹುದಾದ ಅಂಥ ವಿಚಾರಣೆಯನ್ನು ಮಾಡಿದ ತರುವಾಯ ಅಥವಾ ಮಾಡಿಸಿದ ತರುವಾಯ ತೆರಿಗೆಯ ನಿರ್ಧರಣೆಯನ್ನು ಹೆಚ್ಚಿಸುವ ಅಥವಾ ಮಾರ್ಪಡಿಸುವ ಅಥವಾ ತೆರಿಗೆ ನಿರ್ಧರಣೆಯನ್ನು ರದ್ದುಗೊಳಿಸುವ ಅಥವಾ ಹೊಸದಾಗಿ ತೆರಿಗೆ ನಿರ್ಧರಣೆಯನ್ನು ನಿರ್ದೇಶಿಸುವ ಆದೇಶವೂ ಒಳಗೊಂಡಂತೆ ಆ ಪ್ರಕರಣದ ಸನ್ನಿವೇಶಗಳಿಗೆ ಸಮರ್ಥನೀಯವಾಗುವಂತೆ ಅದರ ಬಗ್ಗೆ ಅಂಥ ಆದೇಶವನ್ನು ಹೊರಡಿಸಬಹುದು.

(3) ಅಪರ ಆಯುಕ್ತನು ಅಥವಾ ಆಯುಕ್ತನು, ಸಂದರ್ಭಾನುಸಾರ (1)ನೇ ಉಪ ಪ್ರಕರಣದ ಅಥವಾ (2)ನೇ ಉಪಪ್ರಕರಣದ ಅಡಿಯಲ್ಲಿ,

(ಎ) ಆದೇಶದ ವಿರುದ್ಧ ಅಪೀಲು ಮಾಡಲು ಅವಧಿ ಮುಕ್ತಾಯವಾಗಿರದಿದ್ದರೆ;

(ಬಿ) ವಿಷಯವು 63ನೇ ಪ್ರಕರಣದ ಅಡಿಯಲ್ಲಿ ಒಂದು ಅಪೀಲಿಗೆ ಅಥವಾ ಉಚ್ಚ ನ್ಯಾಯಾಲಯದಲ್ಲಿ ಪುನರೀಕ್ಷಣೆಗೆ ಒಳಪಟ್ಟಿದ್ದರೆ; ಅಥವಾ

(ಸಿ) ಪರಿಷ್ಕರಿಸಬೇಕೆಂದು ಕೋರಲಾದ ಆದೇಶವನ್ನು ಹೊರಡಿಸಿದ ತರುವಾಯ ನಾಲ್ಕು ವರ್ಷಗಳಿಗೂ ಹೆಚ್ಚಿನ ಅವಧಿಯು ಮುಕ್ತಾಯವಾಗಿದ್ದರೆ,

- ಯಾವುದೇ ಅಧಿಕಾರವನ್ನು ಚಲಾಯಿಸತಕ್ಕದ್ದಲ್ಲ.

XX XX XX

**74. ದಾಖಲೆಗಳನ್ನು ಇಡುವುದಕ್ಕೆ ಮತ್ತು ಪರಿಶೋಧಿತ ಲೆಕ್ಕಪತ್ರಗಳ ವಿವರಪತ್ರವನ್ನು ಸಲ್ಲಿಸುವುದಕ್ಕೆ ಸಂಬಂಧಿಸಿದ ದಂಡಗಳು.–** (1) XX

(4) ಪರಿಶೋಧಿತ ಲೆಕ್ಕಪತ್ರಗಳ ವಿವರ ಪತ್ರದ ಒಂದು ಪ್ರತಿಯನ್ನು ನಿಯಮಿಸಿದ ಕಾಲದೊಳಗಾಗಿ ಸಲ್ಲಿಸಲು ವಿಫಲನಾದ ಯಾವೊಬ್ಬ ವ್ಯಾಪಾರಿಗೆ ನಿಯಮಿಸಲಾದ ಪ್ರಾಧಿಕಾರವು ಹಾಗೆ ದಂಡ ವಿಧಿಸುವುದರ ವಿರುದ್ಧ ಲಿಖಿತದಲ್ಲಿ ಕಾರಣ ತೋರಿಸಲು ಒಂದು ಅವಕಾಶವನ್ನು ನೀಡಿದ ತರುವಾಯ, ಐದು ಸಾವಿರ ರೂಪಾಯಿಗಳ ದಂಡವನ್ನು ಮತ್ತು ದಂಡ ನೀಡಲು ತಪ್ಪುವುದು ಮುಂದುವರೆಯುತ್ತಿರವವರೆಗೆ ಪ್ರತಿದಿನಕ್ಕೆ ಐವತ್ತು ರೂಪಾಯಿಗಳ ಹೆಚ್ಚಿನ ದಂಡವನ್ನು ಸಂದಾಯಮಾಡುವುದಕ್ಕೆ ಗುರಿಯಾತಗತಕ್ಕದ್ದು.

XX XX XX

**77. ಮೊಹರುಗಳಿಗೆ ಮತ್ತು ಲೆಕ್ಕ ನೀಡದಿರುವ ದಾಸ್ತಾನುಗಳಿಗೆ ಸಂಬಂಧಿಸಿದ ದಂಡಗಳು.–** (1) ಯಾವೊಬ್ಬ ವ್ಯಕ್ತಿಯು, ಅವನು, 52ನೇ ಪ್ರಕರಣದ (1)ನೇ ಉಪ-ಪ್ರಕರಣದ (ಎಫ್) ಖಂಡದ ಮತ್ತು 53ನೇ ಪ್ರಕರಣದ (4)ನೇ ಉಪ-ಪ್ರಕರಣದ ಉಪಬಂಧಗಳ ಅಡಿಯಲ್ಲಿ ಹಾಕಲಾದ ಒಂದು ಮೊಹರನ್ನು ತೆಗೆದರೆ ಅಥವಾ ಯಾವುದೇ ಬಗೆಯಲ್ಲಿ ಕೆಡಿಸಿದರೆ, ಅವನು, ಪ್ರಥಮ ದರ್ಜೆಯ ಮ್ಯಾಜಿಸ್ಟ್ರೇಟರ ನ್ಯಾಯಾಲಯಕ್ಕೆ ಕಡಿಮೆಯಲ್ಲದ ದರ್ಜೆಯ ಒಂದು ನ್ಯಾಯಾಲಯದಿಂದ ಅಪರಾಧ ನಿರ್ಣಯವಾದ ಮೇಲೆ ಐದು ಸಾವಿರ ರೂಪಾಯಿಗಳಿಗೆ ಕಡಿಮೆಯಿಲ್ಲದ ಆದರೆ, ಇಪ್ಪತ್ತೈದು ಸಾವಿರ ರೂಪಾಯಿಗಳನ್ನು ಮೀರದ ಜುಲ್ಮಾನೆಯಿಂದ ಮತ್ತು ಒಂದು ವರ್ಷಕ್ಕೆ ಮೀರದ ಅವಧಿಯ ಕಾರಾವಾಸ ಶಿಕ್ಷೆಗೆ ಬದ್ಧನಾಗಿರತಕ್ಕದ್ದು.

**KARNATAKA LEGISLATIVE ASSEMBLY**
**THIRTEENTH LEGISLATIVE ASSEMBLY**
**SECOND SESSION**
**(ADJOURNED MEETINGS)**

**THE KARNATAKA VALUE ADDED TAX ( AMENDMENT) BILL, 2009**
**(L.A. Bill No. 20 of 2009)**

A Bill further to amend the Karnataka Value Added Tax Act, 2003.

Whereas it is expedient further to amend the Karnataka Value Added Tax Act, 2003 (Karnataka Act 32 of 2004) for the purposes hereinafter appearing;

Be it enacted by the Karnataka State Legislature in the fifty-ninth year of the Republic of India, as follows.-

**1. Short title and commencement.-** (1) This Act may be called the Karnataka Value Added Tax ( Amendment) Act, 2009.

(2) It shall come into force with effect from the First day of April,2009.

**2. Amendment of section 2.-** In the Karnataka Value Added Tax Act, 2003 (Karnataka Act 32 of 2004) (hereinafter referred to as the principal Act), in section 2, after clause (13 ) ,the following shall be inserted, namely:-

"(13-A) **"Electronic tax register"** means a secure fiscal electronic device meant to issue tax invoices or bills of sale and record the details of such sales, and includes a printer and a device to affix signature of the dealer or his agent. "

**3. Amendment of section 11.-** In section 11 of the principal Act, in sub-section (c), for the words "who is claiming deduction on any amount ", the words "in respect of the amount claimed as deduction" shall be and shall always be deemed to have been substituted ;

**4. Amendment of section 19.-** In section 19 of the principal Act,-

(1) in the heading after the words "**in use",** the words "**or tax payment scheme"** shall be inserted;

(2) after sub-section (2), the following shall be inserted, namely:-

"(3) Where a registered dealer after deducting input tax on any goods used in the course of his business, opts for composition of tax under section 15, the input tax deducted on the goods held in stock on the date on which the dealer so opts shall be repayable by the dealer in the tax period following such date and the input tax so repayable shall be calculated on the market value of such goods on such date." ;

**5. Amendment of section 23.-** In section 23 of the principal Act, after the words "complete particulars", the words and figures "and such dealer on becoming liable to register under section 22 shall on the date he becomes so liable, be eligible for deduction of input tax as specified under section 13 subject to the conditions specified in section 11" shall be inserted;

**6. Amendment of section 27.-** In section 27 of the principal Act, in sub-section (1), the following shall be inserted, namely:-

"Provided that in the case of a deceased individual, on application by his legal heirs for transfer of registration and subject to such conditions as may be prescribed, the prescribed authority may instead of cancellation permit transfer of his certificate of registration to the legal heirs." ;

**7. Amendment of section 31.-** In section 31of the principal Act,-

(1) after sub-section (2), the following sub-sections shall be inserted, namely:-

"(2-A) The Commissioner may require every registered dealer belonging to a class of dealers as may be notified by him to install and use an electronic tax register of such type and description and secured in such manner as may be prescribed, for the purpose of accessing information regarding any matter or transaction which may affect the tax liability of such dealer.

(2-B) Notwithstanding anything contained in sub-sections (1) to (3) of section 29, every registered dealer falling under sub-section (2-A), shall issue tax invoices or bills of sale, through the electronic tax register, irrespective of the value of the goods sold and such dealer shall be allowed to recover the cost of the electronic tax register, in the manner and subject to such conditions as may be prescribed";

(2) in sub-section (4), for the words "taxable turnover", the words "total turnover" shall be substituted.

**8. Amendment of section 35.-** In section 35 of the principal Act, in sub-section (1), after the words " twenty days", the words " or fifteen days" shall be inserted.

**9. Amendment of section 52 .-** In section 52 of the principal Act,-

(1) in sub-section (1),-

(a) after clause (b), the following clause shall be inserted, namely:-

"(b-1) to direct such dealer to produce electronic tax register for examination;" ;

(b) in clause (e),-

(i) after the word 'registers', the words "including electronic tax registers" shall be inserted ;

(ii) after the word "records", the words "including electronic tax registers" shall be inserted;

(2) after sub-section(1), the following shall be inserted, namely:-

"(1-A) The audit party authorized by the Comptroller and Auditor General of India shall have the power to direct any registered dealer to produce at such time and such place as it may specify, accounts, registers, electronic tax register and documents relating to his business activity for examination." ;

(3) in sub-section (2), for the words, brackets and figure "officer authorised under sub-section (1)", the words, brackets, figures and alphabet "officer or audit party authorised under sub-section (1) or (1-a)" shall be substituted.

**10. Amendment of section 53 .-** In section 53 of the principal Act, in sub-section (2), in clause (b), after the word "prescribed", the words "or notified by the Commissioner" shall be inserted.

**11. Amendment of section 62.-** In section 62 of the principal Act, in sub-section (6-A), for clause (ii), the following shall be substituted, namely :-

"(ii) The appellate authority shall pass an order by disposing of an appeal, within a period of ninety days from the date on which the hearing of the case was concluded."

**12. Amendment of section 64 .-** In section 64 of the principal Act, in sub-section (3), the following proviso shall be inserted, namely:-

"Provided that in the case of an order passed by the appellate authority under section 62 allowing the appeal preferred in full, the condition specified in clause (a) shall not apply."

**13. Amendment of section 74.-** In section 74 of the principal Act, in sub-section (4), for the words "failure", the words "failure to submit a copy of the audited statement of accounts " shall be and shall always be deemed to have been substituted;

**14. Amendment of Section 77.-** In section 77 of the principal Act,-

(1) in the heading after the word "seals", a comma and the words ",electronic tax registers" shall be inserted;

(2) after sub-section (1) , the following sub-section shall be inserted, namely:-

"(1-A) Any registered dealer falling under sub-section (2-A) of section 31, who,-

(a) refuses to install an electronic tax register; or

(b) refuses or fails to use the electronic register installed; or

(c) removes or in any way tampers with the seal used to secure any electronic tax register installed or destroys or attempts to destroy any electronic tax register installed, shall be liable on conviction by a Court, not inferior to that of a Magistrate of the First Class, to a fine of not less than five thousand rupees but not exceeding twenty five thousand rupees and imprisonment for a period not exceeding one year."

**STATEMENT OF OBJECTS AND REASONS**

It is considered necessary to amend the Karnataka Value Added Tax Act, 2003 to give effect to the proposals made in the Budget and specifically to,

(i) provide for mandatory use of tamperproof electronic billing devices by certain classes of dealers so as to ensure accounting of all their sales and correct payment of tax by them;

(ii) empower the Comptroller and Auditor General of India to authorise an audit party deputed by him to examine the accounts of a registered dealer to verify the correctness of the returns filed by such dealer;

(iii) provide for reversal of input tax credit deducted by a dealer on his opting for composition tax payment scheme;

(iv) provide for input tax deduction to a voluntarily registered dealer when his taxable turnover exceeds the minimum registration limit;

(v) provide for audit of accounts of dealers with total turnover exceeding forty lakh rupees;

(vi) empower the Commissioner of Commercial Taxes to notify documents that could be carried for transport of goods;

(vii) provide for transfer of certificate of registration issued to a deceased individual to his legal heirs; and

(viii) increase the time limit for passing order disposing of an appeal by the Appellate Authority to ninety days.

Certain consequential and incidental amendments and other amendments to rationalise certain current provision are also made.

Hence, the Bill.

**MEMORANDUM REGARDING DELEGATED LEGISLATION**

**CLAUSE 6-** Proviso to sub-section (1) of Section 27 sought to be introduced under Clause 6 empowers the State Government to prescribe the conditions for transfer of certificate of registration issued to a deceased individual to his legal heirs.

**CLAUSE 7-** Sub-sections (2-A) and (2-B) sought to be inserted in section 31 under Clause 7, empower the Commissioner of Commercial Taxes to notify the class of registered dealers required to use electronic tax registers to issue tax invoices and bills of sale and record their issue and the State Government to make rules to prescribe the type and description of such electronic tax registers and the manner of securing the electronic tax registers.

**CLAUSE 9(2) -** Sub-section (1-A) sought to be inserted in Section 52 under Clause 9(2) empowers the Comptroller and Auditor General of India to authorize any audit party deputed by him to examine the accounts of a registered dealer.

**CLAUSE 11 -** Clause (ii) sought to be inserted in sub-section (6-A) of section 62 under Clause 11 empowers the Commissioner of Commercial Taxes to notify the documents that may be carried by the owner or person in-charge of a goods vehicle or a boat, ship or similar vessel in respect of the goods carried in such goods vehicle or boat, ship or similar vessel.

The proposed delegation of Legislative power is normal in character.

**FINANCIAL MEMORANDUM**

There is no extra expenditure involved by the proposed measures.

**B.S. YEDDYURAPPA**
Chief Minister

**S.B. PATIL**
Secretary, Karnataka Legislative Assembly

**EXTRACT OF THE KARNATAKA VALUE ADDED TAX ACT, 2003**
**(KARNATAKA ACT NO. 32 OF 2004)**

**XXXXX**

**2. Definitions.-** In this Act unless the context otherwise requires:-

(1) '**Agriculture**' with its grammatical variations includes horticulture, the raising of crops, grass or garden produce and grazing but does not include dairy farming, poultry farming, stock breeding and mere cutting of wood.

**XXXXX**

(13) **'Document'** includes written or printed records of any sort, title deeds and data stored electronically in whatever form.

**XXXXX**

**11. Input tax restrictions.-** (a) Input tax shall not be deducted in calculating the net tax payable, in respect of:

**XXXXX**

(c) Input tax shall not be deducted by any dealer executing a works contract who is claiming deduction on any amount paid or payable to any sub-contractor as the consideration for execution of part or whole of such works contract for him.

**XXXXX**

**19. Change in use after deduction of input tax.-** (1) Where a registered dealer has deducted input tax on any goods and those goods are not used in the course of his business or lost or destroyed, any input tax deducted becomes repayable in the period following the date on which those goods were put to such other use.

(2) Where such goods have been wholly or mainly used or are intended for use in sale of taxable goods or in sale of any goods in the course of export out of the territory of India prior to the change of use, input tax repayable shall be calculated on the prevailing market value of such goods at the time of change of use.

**XXXXX**

**23. Voluntary registration.-** A dealer who sells taxable goods, though not liable to register under Section 22 but who desires to register voluntarily, shall make an application to the prescribed authority in such form and in such manner as may be prescribed, giving correct and complete particulars.

**XXXXX**

**27. Cancellation of registration.-** (1) In any case where,

(a) any business of a registered dealer has been discontinued, transferred fully or otherwise disposed of; or

(b) there is any change in the status of the ownership of the business; or

(c) the taxable turnover of sale of goods of a registered dealer has, during any period of twelve consecutive months, not exceeded two lakh rupees; or

(d) a dealer issues tax invoices without effecting any taxable sales; or

(e) a dealer being an individual, registered under this Act dies,

and for any other good and sufficient reason, the prescribed authority may, either on its own motion or on the application of the dealer, or in the case of death, on the application of the legal heirs, made in the prescribed manner, cancel the registration certificate from such date, including any anterior date, as it considers fit having regard to the circumstances of the case.

**XXXXX**

**31. Accounts.-** (1) Every registered dealer and every dealer liable to pay tax under this Act shall keep and maintain a true and correct account, in Kannada or English or Hindi or in such other language as the Government may, by notification, specify, of all his purchases, receipts, sales, other disposals, production, manufacture and stock showing the values of goods subject to each rate of tax under this Act including input tax paid and output tax payable.

(2) If the Commissioner or prescribed authority is of the opinion that the accounts kept and maintained by any dealer or any class of dealers do not sufficiently enable him or it to verify the returns required under this Act or to make any assessment under it, he or it may, by order, require any dealer or class of dealers, to keep such accounts and records including tax invoices of manufacture, sales, purchases, disposals or transfers of stock other than by way of sales in such form and in such manner as he or it may direct.

**XXXXX**

(4) Every dealer whose taxable turnover in a year exceeds forty lakh rupees shall have his accounts audited by a Chartered Accountant or a Cost Accountant or a Tax Practitioner subject to such conditions and such limits as may be prescribed and shall submit to the prescribed authority a copy of the audited statement of accounts and prescribed documents in the prescribed manner.

**XXXXX**

**35. Returns.-** (1) Subject to sub-sections (2) to (4), every registered dealer, and the Central Government, a State Government, a statutory body and a local authority liable to pay tax collected under sub-section (2) of Section 9, shall furnish a return in such form and manner, including electronic methods, and shall pay the tax due on such return within twenty days after the end of the preceding month or any other tax period as may be prescribed.

**XXXXX**

**52. Production and inspection of documents and powers of entry, search and seizure.-** (1) Any officer authorised by the Commissioner in this behalf shall have the power.-

(a) to enter and inspect the place of business of any dealer, or any other place, where it is believed by such Officer that business is being carried on or accounts including documents are being kept by such dealer.

(a-1) to cause purchase of any goods by any person authorized by him from the business premises of any dealer, to check issue of tax invoices or bills of sale by such dealer and on return of goods so purchased by such officer, such dealer or any person in charge of the business premises shall refund the amount paid towards the goods after cancelling any tax invoice or bill of sale issued.

(b) to direct such dealer to produce at such time and at such place accounts, registers and documents relating to his business activities for examination.

(c) to enter and inspect the goods in the possession of the dealer or in the possession of any other person on behalf of such dealer, wherever such goods are kept.

ಇದರಿಂದಾಗಿ ಭಾರತೀಯ ಮದ್ಯ ಮಾರಾಟ ವಹಿವಾಟು ಎರಡು ಪಟ್ಟಿಗೂ ಹೆಚ್ಚಾಗಿದೆ. ಅದರಂತೆ ಚಿಲ್ಲರೆ ಮದ್ಯ ಮಾರಾಟಗಾರರ ಲಾಭದ ಪ್ರಮಾಣದಲ್ಲಿಯೂ ಸಹ ಗಣನೀಯ ಹೆಚ್ಚಳವಾಗಿರುತ್ತದೆ.

ಚಿಲ್ಲರೆ ಮದ್ಯ ಮಾರಾಟದ ವಹಿವಾಟಿನಲ್ಲಿ ಉಂಟಾಗಿರುವ ಹೆಚ್ಚಳ ಹಾಗೂ ಚಿಲ್ಲರೆ ಮಾರಾಟಗಾರರ ಒಟ್ಟಾರೆ ಲಾಭಾಂಶವನ್ನು ಗಮನದಲ್ಲಿಟ್ಟುಕೊಂಡು ಚಿಲ್ಲರೆ ಮದ್ಯ ಮಾರಾಟಗಾರರ ಲಾಭಾಂಶವನ್ನು ಪರಿಷ್ಕರಿಸಲು ಸರ್ಕಾರವು ತೀರ್ಮಾನಿಸಿದೆ. ಅದರಂತೆ ಹಾಲಿ ಇರುವ ಶೇ.20 ಲಾಭಾಂಶವನ್ನು ಶೇ.10ಕ್ಕೆ ನಿಗದಿಪಡಿಸಲು ತೀರ್ಮಾನಿಸಿದೆ.

ಆದ್ದರಿಂದ ಈ ಕೆಳಕಂಡಂತೆ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆಇ 4 ಪಿಇಎಸ್ 09, ಬೆಂಗಳೂರು, ದಿನಾಂಕ: 28ನೇ ಫೆಬ್ರವರಿ, 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಸಂದರ್ಭಗಳ ಹಿನ್ನೆಲೆಯಲ್ಲಿ ಸರ್ಕಾರವು ಡಿಸ್ಟ್ರಿಬ್ಯೂಟರ್ ಸನ್ನದುದಾರರಾದ ಕರ್ನಾಟಕ ರಾಜ್ಯ ಪಾನೀಯ ನಿಗಮ ಮತ್ತು ಚಿಲ್ಲರೆ ಮದ್ಯ ಮಾರಾಟ ಸನ್ನದುದಾರರು ಮಾರಾಟ ಮಾಡುವ ಮದ್ಯಗಳ ಮೇಲೆ ದಿನಾಂಕ 5–3–2009ರಿಂದ ಜಾರಿಗೆ ಬರುವಂತೆ ವಿಧಿಸಬಹುದಾದ ಗರಿಷ್ಠ ಲಾಭಾಂಶವನ್ನು (Margin) ಈ ಕೆಳಗಿನಂತೆ ನಿಗದಿಪಡಿಸಿದೆ;

1. **ಡಿಸ್ಟ್ರಿಬ್ಯೂಟರ್ ಸನ್ನದುದಾರರು (ಕರ್ನಾಟಕ ರಾಜ್ಯ ಪಾನೀಯ ನಿಗಮ) :–** ಸನ್ನದುದಾರರು ಪಾವತಿಸಬೇಕಾದ ಮೂಲಬೆಲೆಯ (landed cost) ಶೇಕಡ 10.5 ಕ್ಕೆ ಮೀರದಂತೆ,
2. **ಚಿಲ್ಲರೆ ಮದ್ಯ ಮಾರಾಟ ಸನ್ನದುದಾರರು:–** ಡಿಸ್ಟ್ರಿಬ್ಯೂಟರ್ ಸನ್ನದುದಾರರ ಮಾರಾಟ ಬೆಲೆಯ ಶೇಕಡ 10ಕ್ಕೆ ಮೀರದಂತೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ.ಎನ್. ಜಗದೀಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಆರ್ಥಿಕ ಇಲಾಖೆ (ಅಬಕಾರಿ)

## ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಸೋಮವಾರ, ಮಾರ್ಚ್ ೨, ೨೦೦೯ (ಫಾಲ್ಗುಣ ೧೧, ಶಕ ವರ್ಷ ೧೯೩೦) | ನಂ. ೧೧೫ |
|---|---|---|

**ಒಳಾಡಳಿತ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಒಇ 90 ಪೊಸಿಲಿ 2008, ಬೆಂಗಳೂರು, ದಿನಾಂಕ: 28ನೇ ಫೆಬ್ರವರಿ, 2009**

ಸರ್ಕಾರದ ಅಧಿಸೂಚನೆ ಸಂಖ್ಯೆ: ಒಇ 28 ಪೊಸಿಲಿ 2005, ದಿನಾಂಕ: 30.6.2007 ರಲ್ಲಿ ಸಹಾಯಕ ನಿರ್ದೇಶಕರು, ಫೋರೆನ್ಸಿಕ್ ಸೈಕಾಲಜಿ, ನ್ಯಾಯ ವಿಜ್ಞಾನ ಪ್ರಯೋಗಾಲಯ ಹುದ್ದೆಗೆ ಎರಡು ವರ್ಷಗಳ ಪರಿವೀಕ್ಷಣೆಯ ಮೇರೆಗೆ ನೇಮಕ ಹೊಂದಿರುವ ಡಾ.ಎಸ್.ಮಾಲಿನಿ, ಇವರು ನೇಮಕ ಹೊಂದಿರುವ ಸದರಿ ಹುದ್ದೆಗೆ ಸೂಕ್ತವಾಗಿಲ್ಲವೆಂದು ಪರಿಗಣಿಸಿ, ಕರ್ನಾಟಕ ಸಿವಿಲ್ ಸೇವಾ (ಪರಿವೀಕ್ಷಣೆ) ನಿಯಮಗಳು, 1977ರ ನಿಯಮ 6(1) ರನ್ವಯ ಸರ್ಕಾರವು ಡಾ.ಎಸ್.ಮಾಲಿನಿ ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸೇವೆಯಿಂದ ಡಿಸ್‌ಚಾರ್ಜ್ (Discharge) ಮಾಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

## ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಸೋಮವಾರ, ಮಾರ್ಚ್ ೨, ೨೦೦೯ (ಫಾಲ್ಗುಣ ೧೧, ಶಕ ವರ್ಷ ೧೯೩೦) | ನಂ. ೧೧೬ |
|---|---|---|

**ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಸಂವ್ಯಶಾಇ 21 ಶಾಸನ 2008, ಬೆಂಗಳೂರು, ದಿನಾಂಕ: 2ನೇ ಮಾರ್ಚ್, 2009**

ಕರ್ನಾಟಕ ವೈದ್ಯೋಪಚಾರ ಸಿಬ್ಬಂದಿಯ ಮೇಲೆ ಹಿಂಸಾಚಾರವನ್ನು ಮತ್ತು ವೈದ್ಯೋಪಚಾರ ಸಂಸ್ಥೆಗಳ ಆಸ್ತಿಗೆ ಹಾನಿ ಮಾಡುವುದನ್ನು ನಿಷೇಧಿಸುವ ವಿಧೇಯಕ, 2009ಕ್ಕೆ, 2009ರ ಫೆಬ್ರವರಿ ಮಾಹೆಯ ಇಪ್ಪತ್ತಾರನೇ ದಿನಾಂಕದಂದು ರಾಜ್ಯಪಾಲರ

ಒಪ್ಪಿಗೆ ದೊರೆತಿದ್ದು, ಸಾಮಾನ್ಯ ತಿಳುವಳಿಕೆಗಾಗಿ ಇದನ್ನು 2009ರ ಕರ್ನಾಟಕ ಅಧಿನಿಯಮ ಸಂಖ್ಯೆ:1 ಎಂಬುದಾಗಿ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಬೇಕೆಂದು ಆದೇಶಿಸಲಾಗಿದೆ.

**2009ರ ಕರ್ನಾಟಕ ಅಧಿನಿಯಮ ಸಂಖ್ಯೆ : 1**

**(2009ರ ಮಾರ್ಚ್ ಎರಡನೇ ದಿನಾಂಕದಂದು ಕರ್ನಾಟಕ ರಾಜ್ಯಪತ್ರದ ವಿಶೇಷ ಸಂಚಿಕೆಯಲ್ಲಿ ಮೊದಲು ಪ್ರಕಟವಾಗಿದೆ)**

**ಕರ್ನಾಟಕ ವೈದ್ಯೋಪಚಾರ ಸಿಬ್ಬಂದಿಯ ಮೇಲೆ ಹಿಂಸಾಚಾರವನ್ನು ಮತ್ತು ವೈದ್ಯೋಪಚಾರ ಸಂಸ್ಥೆಗಳ ಆಸ್ತಿಗೆ ಹಾನಿ ಮಾಡುವುದನ್ನು ನಿಷೇಧಿಸುವ ಅಧಿನಿಯಮ, 2009**

**(2009ರ ಫೆಬ್ರವರಿ ಇಪ್ಪತ್ತಾರನೇ ದಿನಾಂಕದಂದು ರಾಜ್ಯಪಾಲರ ಅನುಮೋದನೆಯನ್ನು ಪಡೆಯಲಾಗಿದೆ)**

ವೈದ್ಯೋಪಚಾರ ಸಿಬ್ಬಂದಿಯ ಮೇಲಿನ ಹಿಂಸಾಚಾರವನ್ನು ಮತ್ತು ವೈದ್ಯೋಪಚಾರ ಸಂಸ್ಥೆಗಳ ಆಸ್ತಿಗೆ ಹಾನಿ ಮಾಡುವುದನ್ನು ನಿಷೇಧಿಸುವ ಮತ್ತು ಅದಕ್ಕೆ ಸಂಬಂಧಿಸಿದ ಮತ್ತು ಅದಕ್ಕೆ ಪ್ರಾಸಂಗಿಕವಾದ ವಿಷಯಗಳಿಗೆ ಉಪಬಂಧ ಕಲ್ಪಿಸುವ ಒಂದು ಅಧಿನಿಯಮ.

ವೈದ್ಯೋಪಚಾರ ಸಿಬ್ಬಂದಿಯ ಮೇಲೆ ಹಿಂಸಾಚಾರವನ್ನು ಮತ್ತು ವೈದ್ಯೋಪಚಾರ ಸಂಸ್ಥೆಗಳ ಆಸ್ತಿಗೆ ಹಾನಿ ಮಾಡುವುದನ್ನು ನಿಷೇಧಿಸುವುದು ಮತ್ತು ಅದಕ್ಕೆ ಸಂಬಂಧಿಸಿದ ಮತ್ತು ಅದಕ್ಕೆ ಪ್ರಾಸಂಗಿಕವಾದ ವಿಷಯಗಳಿಗೆ ಉಪಬಂಧ ಕಲ್ಪಿಸುವುದು ಯುಕ್ತವಾಗಿರುವುದರಿಂದ;

ಇದು ಭಾರತ ಗಣರಾಜ್ಯದ ಐವತ್ತೊಂಬತ್ತನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗಲಿ, ಎಂದರೆ:–

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.–** (1) ಈ ಅಧಿನಿಯಮವನ್ನು ಕರ್ನಾಟಕ ವೈದ್ಯೋಪಚಾರ ಸಿಬ್ಬಂದಿಯ ಮೇಲೆ ಹಿಂಸಾಚಾರವನ್ನು ಮತ್ತು ವೈದ್ಯೋಪಚಾರ ಸಂಸ್ಥೆಗಳ ಆಸ್ತಿಗೆ ಹಾನಿ ಮಾಡುವುದನ್ನು ನಿಷೇಧಿಸುವ ಅಧಿನಿಯಮ, 2009 ಎಂದು ಕರೆಯತಕ್ಕದ್ದು.

(2) ಇದು ಈ ಕೂಡಲೇ ಜಾರಿಗೆ ಬರತಕ್ಕದ್ದು.

**2. ಪರಿಭಾಷೆಗಳು.–** ಈ ಅಧಿನಿಯಮದಲ್ಲಿ, ಸಂದರ್ಭಕ್ಕೆ ಬೇರೆ ಅರ್ಥದ ಅಗತ್ಯವಿದ್ದ ಹೊರತು,–

(ಎ) "ವೈದ್ಯೋಪಚಾರ ಸಂಸ್ಥೆಗಳು" ಎಂದರೆ ರಾಜ್ಯ ಸರ್ಕಾರ ಅಥವಾ ಕೇಂದ್ರ ಸರ್ಕಾರ ಅಥವಾ ಸ್ಥಳೀಯ ಸಂಸ್ಥೆಗಳು ಮುಂತಾದವುಗಳ ನಿಯಂತ್ರಣದಲ್ಲಿರುವ ಜನರಿಗೆ ವೈದ್ಯೋಪಚಾರ ಸೇವೆ ಒದಗಿಸುತ್ತಿರುವ ಎಲ್ಲಾ ಸಂಸ್ಥೆಗಳು ಮತ್ತು ಇದರಲ್ಲಿ ರೋಗಿಗಳ ಚಿಕಿತ್ಸೆಗೆ ಸೌಲಭ್ಯವುಳ್ಳ ಮತ್ತು ಅವರನ್ನು ಬರಮಾಡಿಕೊಳ್ಳುವುದಕ್ಕೆ ಅಥವಾ ಅವರ ವಾಸ್ತವ್ಯಕ್ಕೆ ಸೌಲಭ್ಯಗಳನ್ನುಳ್ಳ ಯಾವುದೇ ಖಾಸಗಿ ಆಸ್ಪತ್ರೆ, ಹೆರಿಗೆಗಾಗಿ ಮತ್ತು ಹೆರಿಗೆ ಸಂಬಂಧದಲ್ಲಿ ಗರ್ಭಿಣಿ ಹಾಗು ಬಾಣಂತನದ ಆರೈಕೆಗಾಗಿ ಅಥವಾ ಅದಕ್ಕೆ ಸಂಬಂಧಿಸಿದ ಇತರ ಯಾವುದೇ ಕಾರಣಕ್ಕಾಗಿ ಮಹಿಳೆಯರನ್ನು ವಾಡಿಕೆಯಾಗಿ ಬರಮಾಡಿಕೊಳ್ಳುವ ಮತ್ತು ದಾಖಲಿಸಿಕೊಳ್ಳುವ ಯಾವುದೇ ಖಾಸಗಿ ಪ್ರಸೂತಿ ಗೃಹ; ಮತ್ತು ದೇಹದ ಅಥವಾ ಮನಸ್ಸಿನ ಯಾವುದೇ ಖಾಯಿಲೆ, ಗಾಯ ಅಥವಾ ದುರ್ಬಲತೆಯಿಂದ ಬಳಲುತ್ತಿರುವ ವ್ಯಕ್ತಿಗಳ ಉಪಚಾರ ಮತ್ತು ವಾಸ್ತವ್ಯಕ್ಕೆ ಬಳಸುವ ಅಥವಾ ಹಾಗೆ ಬಳಸುವ ಉದ್ದೇಶವುಳ್ಳ ಮತ್ತು ಚಿಕಿತ್ಸೆ ಅಥವಾ ಶುಶ್ರೂಷೆ ಒದಗಿಸುವ ಅಥವಾ ಅವರೆಡನ್ನೂ ಒದಗಿಸುವ ಯಾವುದೇ ಖಾಸಗಿ ನರ್ಸಿಂಗ್ ಹೋಮ್ ಒಳಗೊಳ್ಳುತ್ತವೆ ಮತ್ತು ಇದು ಪ್ರಸೂತಿಗೃಹ ಅಥವಾ ಆರೋಗ್ಯಧಾಮ ಮುಂತಾದುವುಗಳನ್ನೂ ಒಳಗೊಳ್ಳುತ್ತವೆ.

(ಬಿ) "ವೈದ್ಯೋಪಚಾರ ಸಂಸ್ಥೆಗೆ ಸಂಬಂಧಿಸಿದಂತೆ ವೈದ್ಯೋಪಚಾರ ಸಿಬ್ಬಂದಿ" ಎಂಬುದರಲ್ಲಿ,–

(i) ವೈದ್ಯೋಪಚಾರ ಸಂಸ್ಥೆಗಳಲ್ಲಿ (ತಾತ್ಕಾಲಿಕ ನೋಂದಣಿಯನ್ನು ಹೊಂದಿರುವವರೂ ಸೇರಿದಂತೆ) ಕಾರ್ಯನಿರ್ವಹಿಸುತ್ತಿರುವ ನೋಂದಾಯಿತ ವೈದ್ಯರು;

(ii) ನೋಂದಾಯಿತ ಶುಶ್ರೂಷಕಿಯರು;

(iii) ವೈದ್ಯ ವಿದ್ಯಾರ್ಥಿಗಳು;

(iv) ನರ್ಸಿಂಗ್ ವಿದ್ಯಾರ್ಥಿಗಳು;

(v) ವೈದ್ಯೋಪಚಾರ ಸಂಸ್ಥೆಗಳಲ್ಲಿ ನೇಮಿಸಲ್ಪಟ್ಟ ಮತ್ತು ಕಾರ್ಯನಿರ್ವಹಿಸುತ್ತಿರುವ ಅರೆ ವೈದ್ಯಕೀಯ ಕಾರ್ಯಕರ್ತರು;

(ಸಿ) "ಅಪರಾಧಿ" ಎಂದರೆ ಯಾವುದೇ ವ್ಯಕ್ತಿಯು ತಾನೊಬ್ಬನೇ ಅಥವಾ ವ್ಯಕ್ತಿಗಳ ಗುಂಪಿನ ಅಥವಾ ಸಂಘದ ಒಬ್ಬ ಸದಸ್ಯನಾಗಿ ಅಥವಾ ನಾಯಕನಾಗಿ ಈ ಅಧಿನಿಯಮದಡಿಯಲ್ಲಿ ಹಿಂಸಾಚಾರವನ್ನು ಮಾಡುವ ಅಥವಾ ಮಾಡುವುದಕ್ಕೆ ಪ್ರಯತ್ನಿಸುವ ಅಥವಾ ಮಾಡುವುದಕ್ಕೆ ದುಷ್ಪ್ರೇರಿಸುವ ಅಥವಾ ಪ್ರಚೋದಿಸುವ ಯಾವೊಬ್ಬ ವ್ಯಕ್ತಿ;

(ಡಿ) "ಹಿಂಸೆ" ಎಂದರೆ ವೈದ್ಯೋಪಚಾರ ಸಂಸ್ಥೆಯಲ್ಲಿ ಕಾರ್ಯವನ್ನು ನಿರ್ವಹಿಸುತ್ತಿರುವಾಗ ಯಾವೊಬ್ಬ ವೈದ್ಯೋಪಚಾರ ಸಿಬ್ಬಂದಿಗೆ ಯಾವುದೇ ಕೆಡಕು ಅಥವಾ ಗಾಯವುಂಟು ಮಾಡುವ, ಪ್ರಾಣಾಪಾಯ ಉಂಟುಮಾಡುವ ಅಥವಾ ಬೆದರಿಕೆ ಒಡ್ಡುವ, ಅಡ್ಡಿ ಉಂಟುಮಾಡುವ ಅಥವಾ ಆತಂಕವುಂಟು ಮಾಡುವ ಅಥವಾ ವೈದ್ಯೋಪಚಾರ ಸಂಸ್ಥೆಯಲ್ಲಿನ ಆಸ್ತಿಗೆ ಹಾನಿವುಂಟುಮಾಡುವ ಯಾವುವೇ ಚಟುವಟಿಕೆಗಳು;

**3. ಹಿಂಸೆಯ ನಿಷೇಧ.–** ವೈದ್ಯೋಪಚಾರ ಸಿಬ್ಬಂದಿಯ ಮೇಲೆ ಯಾವುದೇ ಹಿಂಸಾಚಾರ ಮಾಡುವುದನ್ನು ಅಥವಾ ವೈದ್ಯೋಪಚಾರ ಸಂಸ್ಥೆಯಲ್ಲಿನ ಆಸ್ತಿಗೆ ಹಾನಿ ಉಂಟುಮಾಡುವುದನ್ನು ನಿಷೇಧಿಸಲಾಗಿದೆ.

**4. ದಂಡ.–** 3ನೇ ಪ್ರಕರಣವನ್ನು ಉಲ್ಲಂಘಿಸುವ ಯಾವುದೇ ಕೃತ್ಯವನ್ನು ಮಾಡುವ ಯಾವೊಬ್ಬ ವ್ಯಕ್ತಿಯು ಮೂರು ವರ್ಷಗಳ ಅವಧಿಯ ಕಾರಾವಾಸದಿಂದ ಮತ್ತು ಐವತ್ತು ಸಾವಿರ ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ದಂಡಿತನಾಗತಕ್ಕದ್ದು.

**5. ಅಪರಾಧದ ಸಂಜ್ಞಾನ.–** 3ನೇ ಪ್ರಕರಣವನ್ನು ಉಲ್ಲಂಘಿಸಿ ಮಾಡಲಾದ ಯಾವುದೇ ಅಪರಾಧವು ಸಂಜ್ಞೇಯ ಮತ್ತು ಜಾಮೀನೀಯವಲ್ಲದ್ದಾಗಿರತಕ್ಕದ್ದು.

**6. ಆಸ್ತಿಗೆ ಉಂಟಾದ ಹಾನಿಯ ನಷ್ಟದ ವಸೂಲಿ.–** (1) ಅಪರಾಧಿಯು 4ನೇ ಪ್ರಕರಣದಲ್ಲಿ ನಿರ್ದಿಷ್ಟಪಡಿಸಿದ ದಂಡನೆಗೆ ಗುರಿಯಾಗುವುದರ ಜೊತೆಗೆ, ಅಪರಾಧದ ಅಧಿವಿಚಾರಣೆ ಮಾಡುತ್ತಿರುವ ನ್ಯಾಯಾಲಯವು ನಿರ್ಧರಿಸಿದಂತೆ ಆಸ್ತಿಗೆ ಉಂಟಾದ ನಷ್ಟದ ಮತ್ತು ಹಾನಿಗೊಳಗಾದ ವೈದ್ಯಕೀಯ ಸಲಕರಣೆಯ ಖರೀದಿ ಬೆಲೆಯ ಎರಡರಷ್ಟು ಮೊತ್ತದ ದಂಡವನ್ನು ಸಂದಾಯ ಮಾಡಲು ಹೊಣೆಗಾರನಾಗತಕ್ಕದ್ದು.

(2) ಅಪರಾಧಿಯು (1)ನೇ ಉಪಪ್ರಕರಣದ ಅಡಿಯಲ್ಲಿ ದಂಡದ ಮೊತ್ತವನ್ನು ಸಂದಾಯ ಮಾಡದಿದ್ದಲ್ಲಿ, ಸದರಿ ಮೊತ್ತವನ್ನು, ಕರ್ನಾಟಕ ಭೂ ಕಂದಾಯ ಅಧಿನಿಯಮ, 1964ರ (1964ರ ಕರ್ನಾಟಕ ಅಧಿನಿಯಮ 12) ಉಪಬಂಧಗಳ ಅಡಿಯಲ್ಲಿ ಭೂ ಕಂದಾಯದ ಬಾಕಿಯಂತೆ ವಸೂಲಿ ಮಾಡತಕ್ಕದ್ದು.

**7. ಈ ಅಧಿನಿಯಮದ ಉಪಬಂಧಗಳು ಇತರ ಕಾನೂನುಗಳಿಗೆ ಹೆಚ್ಚುವರಿಯಾಗಿರತಕ್ಕದ್ದು.–** ಈ ಅಧಿನಿಯಮದ ಉಪಬಂಧಗಳು, ಪ್ರಸ್ತುತ ಜಾರಿಯಲ್ಲಿರುವ, ಯಾವುದೇ ಇತರ ಕಾನೂನಿನ ಉಪಬಂಧಗಳಿಗೆ ಹೆಚ್ಚುವರಿಯಾಗಿರತಕ್ಕದ್ದೇ ಹೊರತು ಅವನ್ನು ನ್ಯೂನಗೊಳಿಸತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಜಿ.ಕೆ. ಬೋರೇಗೌಡ**
ಸರ್ಕಾರದ ಕಾರ್ಯದರ್ಶಿ
ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ

**ವಿಶೇಷ ಪತ್ರಿಕೆ**



| ಭಾಗ – III | ಬೆಂಗಳೂರು, ಸೋಮವಾರ, ಮಾರ್ಚ್ ೨, ೨೦೦೯ (ಫಾಲ್ಗುಣ ೧೧, ಶಕ ವರ್ಷ ೧೯೩೦) | ನಂ. ೧೧೮ |
|---|---|---|



**ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ**

**1966ರ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯ್ದೆಯ ವಿಧಿ 4ರ ಮೇರೆಗೆ ಅಧಿಸೂಚನೆ**

**ಸಂಖ್ಯೆ: ಸಿಐ 159 ಎಸ್‌ಪಿಕ್ಯೂ 2008, ಬೆಂಗಳೂರು, ದಿನಾಂಕ: 2ನೇ ಮಾರ್ಚ್, 2009**

ರಾಮನಗರ ಜಿಲ್ಲೆ, ಕನಕಪುರ ತಾಲ್ಲೂಕು, ಹಾರೋಹಳ್ಳಿ ಹೋಬಳಿ, ಕಗ್ಗಲಹಳ್ಳಿ ಗ್ರಾಮದಲ್ಲಿನ ಈ ಕೆಳಕಂಡ ಸರ್ವೆ ನಂ. ಮತ್ತು ವಿಸ್ತೀರ್ಣ ಜಮೀನನ್ನು ಕರ್ನಾಟಕ ಸರ್ಕಾರವು ಕೈಗಾರಿಕಾ ಪ್ರದೇಶಾಭಿವೃದ್ಧಿಗಾಗಿ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯ್ದೆ 1966ರ ವಿಧಿ 3(1) 1(3) ಮತ್ತು 28(1) ಅಧಿಸೂಚನೆ ಸಂಖ್ಯೆ: ಸಿಐ 388 ಎಸ್‌ಪಿಕ್ಯೂ 2006, ದಿನಾಂಕ : 26.10.2006ರ ಪ್ರಕಾರ ಅನುಮೋದನೆಗೊಂಡು ದಿನಾಂಕ: 26.10.2006ರ ಕರ್ನಾಟಕ ರಾಜ್ಯ ಪತ್ರದ ವಿಶೇಷ ಪತ್ರಿಕೆ ಭಾಗ–3 ರ ಪುಟ ಸಂಖ್ಯೆ 1 ರಿಂದ 40ರ ವರೆಗೆ ಪ್ರಕಟಿಸಲಾಗಿದೆ.

ಈ ಕೆಳಕಂಡ ಸರ್ವೆ ನಂಬರ್‌ನಲ್ಲಿ ನಮೂದಿಸಿರುವ ಜಮೀನು ಸರ್ಕಾರಕ್ಕೆ ಅವಶ್ಯಕತೆ ಇಲ್ಲದ ಕಾರಣ ಜಮೀನನ್ನು ಸ್ವಾಧೀನ ಕ್ರಮದಿಂದ ಕೈಬಿಡಲು ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯ್ದೆ 1966ರ ಕಲಂ 4ರನ್ವಯ ದತ್ತವಾದ

ಅಧಿಕಾರವನ್ನು ಚಲಾಯಿಸಿ ಕಲಂ 3(1) 1(3) ಮತ್ತು 28(1)ರ ಅಧಿಸೂಚನೆಯಿಂದ ಸದರಿ ಜಮೀನನ್ನು ಸ್ವಾಧೀನ ಪ್ರಕ್ರಿಯೆಯಿಂದ ಕೈಬಿಡಲಾಗಿದೆ.

**ಜಿಲ್ಲೆ: ರಾಮನಗರ ತಾಲ್ಲೂಕು : ಕನಕಪುರ ಹೋಬಳಿ : ಹಾರೋಹಳ್ಳಿ ಗ್ರಾಮ : ಕಗ್ಗಲಹಳ್ಳಿ**

| ಕ್ರಮ. ಸಂಖ್ಯೆ. | ಗ್ರಾಮ | ಸರ್ವೆ ನಂ. | ವಿಸ್ತೀರ್ಣ ಎ – ಗು |
|---|---|---|---|
| 1 | 2 | 3 | 4 |
| 1 | ಕಗ್ಗಲಹಳ್ಳಿ | 40/1 | 3–09 |
| 2 | ಕಗ್ಗಲಹಳ್ಳಿ | 40/2 | 0–08 |
| 3 | ಕಗ್ಗಲಹಳ್ಳಿ | 41/3 | 0–08 |
| ಒಟ್ಟು | | | **3–25** |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ.ಎಂ. ವೀರಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ (ಕೈ.ಅ), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

## ವಿಶೇಷ ಪತ್ರಿಕೆ

**ಭಾಗ – IV-A** | ಬೆಂಗಳೂರು, ಸೋಮವಾರ, ಮಾರ್ಚ್ ೨, ೨೦೦೯ (ಫಾಲ್ಗುಣ ೧೧, ಶಕ ವರ್ಷ ೧೯೩೦) | ನಂ. ೧೧೯

**PERSONNEL AND ADMINISTRATION REFORMS SECRETARIAT**

**NOTIFICATION**

**No. DPAR 21 EGV 2009, Bangalore, Dated : 24th February 2009**

In exercise of the powers conferred by section 18A of the Karnataka Transparency in Public Procurement (Amendment) Act 2007, Government of Karnataka hereby notifies, the implementation of e-Procurement through a single unified platform, for all procurements valued Rs. 10.00 lakhs and above in Mysore city Corporation with effect from 01st March 2009.

By order and in the name of the Governor of Karnataka,
**Vipin Singh**
Deputy Secretary(I/c), e-Governance
Department of Personnel and Administration Reforms (AR)

## ವಿಶೇಷ ಪತ್ರಿಕೆ

**ಭಾಗ – IV-A** | ಬೆಂಗಳೂರು, ಬುಧವಾರ, ಮಾರ್ಚ್ ೪, ೨೦೦೯ (ಫಾಲ್ಗುಣ ೧೩, ಶಕ ವರ್ಷ ೧೯೩೦) | ನಂ. ೧೨೦

**PERSONNEL AND ADMINISTRATION REFORMS SECRETARIAT**
**NOTIFICATION**
**No. DPAR 20 EGV 2009, Bangalore, Dated : 21st February 2009**

In exercise of the powers conferred by section 18A of the Karnataka Transparency in Public Procurement (Amendment) Act 2007, Government of Karnataka hereby notifies, the implementation of e-Procurement through a single unified platform, for all procurements valued Rs. 10.00 lakhs and above in Bangalore Development Authority with effect from 01st March 2009.

By order and in the name of the Governor of Karnataka,
**Vipin Singh**
Deputy Secretary (I/c), e-Governance
Department of Personnel and Administration Reforms (AR)

## ವಿಶೇಷ ಪತ್ರಿಕೆ

| | | |
|---|---|---|
| ಭಾಗ – IV-A | ಬೆಂಗಳೂರು, ಬುಧವಾರ, ಮಾರ್ಚ್ ೪, ೨೦೦೯ (ಫಾಲ್ಗುಣ ೧೩, ಶಕ ವರ್ಷ ೧೯೩೦) | ನಂ. ೧೨೨ |

**PARLIAMENTARY AFFAIRS AND LEGISLATION SECRETARIAT**

**NOTIFICATION**

**No. Samvyashae 20 Samvyavi 2009, Bangalore, Dated : 4th March, 2009**

The following Order made by the Governor is hereby published for general information:-

**" ORDER - II**

In exercise of the powers conferred upon me by sub-clause (a) of clause (2) of Article 174 of the Constitution of India, I, Rameshwar Thakur, Governor of Karnataka do hereby prorogue the Karnataka Legislative Assembly.

**RAMESHWAR THAKUR**
**Governor of Karnataka"**

By order and in the name of the Governor of Karnataka,
**G.K.BOREGOWDA**
Secretary to Government
Department of Parliamentary Affairs and Legislation

## ವಿಶೇಷ ಪತ್ರಿಕೆ

| | | |
|---|---|---|
| ಭಾಗ – IV-A | ಬೆಂಗಳೂರು, ಬುಧವಾರ, ಮಾರ್ಚ್ ೪, ೨೦೦೯ (ಫಾಲ್ಗುಣ ೧೩, ಶಕ ವರ್ಷ ೧೯೩೦) | ನಂ. ೧೨೩ |

**PARLIAMENTARY AFFAIRS AND LEGISLATION SECRETARIAT**

**NOTIFICATION**

**No. Samvyashae 08 Samvyavi 2009, Bangalore, Dated : 4th March, 2009**

The following Order made by the Governor is hereby published for general information:-

**" ORDER-I**

In exercise of the powers conferred upon me by sub-clause (a) of clause (2) of Article 174 of the Constitution of India, I, Rameshwar Thakur, Governor of Karnataka do hereby prorogue the Karnataka Legislative Council.

**RAMESHWAR THAKUR**
**Governor of Karnataka"**

By order and in the name of the Governor of Karnataka,

**G.K.BOREGOWDA**
Secretary to Government
Department of Parliamentary Affairs and Legislation

## ವಿಶೇಷ ಪತ್ರಿಕೆ

| | | |
|---|---|---|
| ಭಾಗ – IV-A | ಬೆಂಗಳೂರು, ಬುಧವಾರ, ಮಾರ್ಚ್ ೪, ೨೦೦೯ (ಫಾಲ್ಗುಣ ೧೩, ಶಕ ವರ್ಷ ೧೯೩೦) | ನಂ. ೧೨೪ |

**EDUCATION SECRETARIAT**

**NOTIFICATION**

**No. ED 30 UPC 2008, Bangalore, Dated : 2nd MARCH 2009**

The draft of the following rules further to amend the Karnataka Educational Institutions (Collegiate Education) Rules, 2003 which the Government of Karnataka proposes to make in exercise of the powers conferred by sub-section (1) of section 145 of the Karnataka Education Act, 1983 (Karnataka Act 1 of 1995)

is hereby published as required by sub-section(1) of section 145 of the said Act, for the information of all the persons likely to be affected there by and notice is hereby given that the said draft will be taken into consideration after thirty days from the date if its publication in the Official Gazette.

Any objection or suggestion which may be received by the State Government from any person with respect to the said draft before the expiry of the period specified above will be considered by the State Government. Objections and suggestions may be addressed to the Principal Secretary to Government, Education Department (Higher Education), M.S. Building, Bangalore – 560 001.

**DRAFT RULES**

**1. Title and Commencement**.- (1) These rules may be called the Karnataka Educational Institutions (Collegiate Education) (Amendment) Rules, 2009.

(2) They shall come into force from the date of their publication in the Official Gazette.

**2. Amendment of Rule 8.-** In the Karnataka Educational Institutions (Collegiate Education) Rules, 2003, in rule 8, after sub-rule (1), the following proviso shall be inserted, namely:-

"Provided that subject to fulfillment of other conditions specified in these rules all the Private education institutions managed by the Scheduled Castes/Scheduled Tribes, established and functioning on or before 31-03-95 and continuously functioning till the date of commencement of the Karnataka Educational Institutions (Collegiate Education) (Amendment) Rules, 2009 shall be eligible for grant-in-aid subject to such other conditions as may be notified by the Education Department to consider it as Scheduled Castes or Scheduled Tribes management Institutions and eligibility for grant in aid.

**"Explanation.-** For the purpose of this clause Scheduled Castes and Scheduled Tribes management Educational Institutions means, all the members in the management committee shall be and shall continue to belong to Scheduled Castes or Scheduled Tribes"

By order and in the name of the Governor of Karnataka,

**S.M. NANDAKUMAR**
Under Secretary to Government
Education Department (CE)

# ವಿಶೇಷ ಪತ್ರಿಕೆ

| ಭಾಗ - III | ಬೆಂಗಳೂರು, ಶನಿವಾರ, ಫೆಬ್ರವರಿ ೨೮, ೨೦೦೯ (ಫಾಲ್ಗುಣ ೯, ಶಕ ವರ್ಷ ೧೯೩೦) | ನಂ. ೧೧೦ |
|---|---|---|

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

## ಅಧಿಸೂಚನೆ

### 1966 ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯ್ದೆಯ ವಿಧಿ 28(4)ರ ಮೇರೆಗೆ

### ಸಂಖ್ಯೆ: ಸಿಐ 737 ಎಸ್‌ಪಿಕ್ಯೂ 2007, ಬೆಂಗಳೂರು, ದಿನಾಂಕ, 28ನೇ ಫೆಬ್ರವರಿ, 2009

1966ರ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯ್ದೆಯ (1966ರ ಕರ್ನಾಟಕ ಕಾಯ್ದೆ ಸಂಖ್ಯೆ:18) ವಿಧಿ 28(1)ರ ಪ್ರಕಾರ ದತ್ತವಾದ ಅಧಿಕಾರದ ಮೇರೆಗೆ ದಿನಾಂಕ : 15-4-2008 ರ ಕರ್ನಾಟಕ ವಿಶೇಷ ರಾಜ್ಯ ಪತ್ರ ಭಾಗ-3 ರಲ್ಲಿ ಪ್ರಕಟಿಸಲಾಗಿರುವ ಅಧಿಸೂಚನೆ ಸಂಖ್ಯೆ : ಸಿಐ 737 ಎಸ್.ಪಿ.ಕ್ಯೂ. 2007 ದಿನಾಂಕ : 4-4-2008ರ ಪುಟ ಸಂಖ್ಯೆ 13 ರಿಂದ 71 ರವರೆಗೆ ಕರ್ನಾಟಕ ಸರ್ಕಾರವು ಅಧಿಸೂಚನೆಯಲ್ಲಿ ನಮೂದಿಸಲ್ಪಟ್ಟಿರುವ ಜಮೀನುಗಳನ್ನು ಅದೇ ಅಧಿಸೂಚನೆಯಲ್ಲಿ ಕೇಳಿರುವ ಉದ್ದೇಶಕ್ಕಾಗಿ ಸ್ವಾಧೀನಪಡಿಸಿಕೊಳ್ಳುವ ಇಚ್ಛೆಪಟ್ಟಿದೆ.

ಮೇಲ್ಕಂಡ ಅಧಿಸೂಚನೆಯ ಷೆಡ್ಯೂಲ್‌ನಲ್ಲಿ ನಮೂದಿಸಲ್ಪಟ್ಟಿರುವ ಜಮೀನುಗಳನ್ನು ಅಧಿಸೂಚನೆಯಲ್ಲಿ ಪ್ರಕಟಿಸಲಾಗಿರುವ ಉದ್ದೇಶಕ್ಕೆ ಸ್ವಾಧೀನಪಡಿಸಿಕೊಳ್ಳಬೇಕಾಗಿರುವುದು ಕರ್ನಾಟಕ ಸರ್ಕಾರಕ್ಕೆ ಮನದಟ್ಟಾಗಿದೆ ಈ ಬಗ್ಗೆ ಮೇಲ್ಕಂಡ ಕಾಯ್ದೆಯ ವಿಧಿ 28(3)ರ ಆದೇಶ ಹೊರಡಿಸಲಾಗಿದೆ.

ಆದುದರಿಂದ ಈಗ 1966ರ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯ್ದೆ ವಿಧಿ 28(4)ರ (1966ರ ಕರ್ನಾಟಕ ಕಾಯ್ದೆ ಸಂಖ್ಯೆ : 18)ರ ಮೇರೆಗೆ ಕರ್ನಾಟಕ ಸರ್ಕಾರ ಈ ಕೆಳಗೆ ನಮೂದಿಸಿರುವ ಜಮೀನುಗಳನ್ನು ಅಧಿಸೂಚನೆಯಲ್ಲಿ ತಿಳಿಸಿರುವ ಅಂದರೆ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿಯಿಂದ ವಿಮಾನ ನಿಲ್ದಾಣಕ್ಕಾಗಿ ಭೂಸ್ವಾಧೀನಪಡಿಸಿಕೊಂಡ ಪ್ರಯುಕ್ತ ರಸ್ತೆ ಮುಚ್ಚಿ ಹೋಗಿರುವುದರಿಂದ ಮಂಡಕಳ್ಳಿ ಗ್ರಾಮಸ್ಥರಿಗೆ ತಿರುಗಾಡಲು ಪರ್ಯಾಯ ರಸ್ತೆ ನಿರ್ಮಾಣದ ಸ್ಥಾಪನೆಯ ಉದ್ದೇಶಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾಗುವುದೆಂದು ಈ ಮೂಲಕ ಘೋಷಿಸಲಾಗಿದೆ.

## ಅನುಸೂಚಿ

ಗ್ರಾಮ : ಮಂಡಕಳ್ಳಿ ಹೋಬಳಿ : ಕಸಬಾ ತಾಲ್ಲೂಕು : ಮೈಸೂರು ಜಿಲ್ಲೆ : ಮೈಸೂರು

| ಕ್ರ. ಸಂ. | ಸರ್ವೆ ನಂ. | ಖಾತೆದಾರರ / ಅನುಭವದಾರರ ಹೆಸರು | ಭೂಸ್ವಾಧೀನಕ್ಕೆ ಬೇಕಾದ ಅಂದಾಜು ವಿಸ್ತೀರ್ಣ | | | ತರಹೆ | ಆಕಾರ | ಚೆಕ್ಕುಬಂದಿ ಸರ್ವೆ ನಂ. | | | |
|---|---|---|---|---|---|---|---|---|---|---|---|
| | | | ಐನ್ ಎ–ಗು | ಖರಾಬು ಎ–ಗು | ಬಾಕಿ ಎ–ಗು | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ |
| 1 | 2 | 3 | 4 | 5 | 6 | 7 | 8 | 9 | 10 | 11 | 12 |
| 1 | 193 | ಟಿ. ವಸುಂದರಾ ಬಿನ್ ಎನ್. ತಿಮ್ಮಯ್ಯ, ಮಾಲಮ್ಮ ಕೋಂ ಬಕ್ರೆಗೌಡ | 0–18 | 0–01 | 0–17 | ಖುಷ್ಕಿ | 0–30 | 201 | 193/3 ಉಳಿಕೆ | 193 ಉಳಿಕೆ | 193 ಉಳಿಕೆ |
| 2 | 201 | ಸರ್ಕಾರಿ ಗೋಮಾಳ | 0–04 | 0–04 | – | – | – | ರೈಲ್ವೆ ಲೈನ್ | 193 | 201 ಉಳಿಕೆ | 201 ಉಳಿಕೆ |
| 3 | 202 | ಬಸವರಾಜು ಬಿನ್ ಬಸವಯ್ಯ | 0–05 | – | 0–05 | ಖುಷ್ಕಿ | 0–08 | 203/2 | ರೈಲ್ವೆ ಲೈನ್ | 204 | ರೈಲ್ವೆ ಲೈನ್ |

| | | | | | | | | | | | |
|---|---|---|---|---|---|---|---|---|---|---|---|
| 4 | ೨೦೩/1 | ಬಸವರಾಜು ಬಿನ್ ಬಸವಯ್ಯ | 0–07 1/2 | – | 0–07 1/2 | ಖುಷ್ಕಿ | 0–10 | ೨೦೬/1 | ೨೦೩/1 | ೨೦೩/1 | ೨೦೩/1 |
| 5 | ೨೦೩/೩ | ಬಸವರಾಜು ಬಿನ್ ಬಸವಯ್ಯ | 0–04 | – | 0–04 | ಖುಷ್ಕಿ | 0–05 | ೨೦೩/1 | ೨೦೨ | ೨೦೩ ಉಳಿಕೆ | ೨೦೨ |
| 6 | ೨೦೬/1 | ಬಸವರಾಜು ಬಿನ್ ಬಸವಯ್ಯ | 0–04 | – | 0–04 | ಖುಷ್ಕಿ | 0–05 | ೨೦೬/೨ | ೨೦೩/1 | ೨೦೬/1 | ೨೦೬/1 |
| ೭ | ೨೦೬/೨ | ಡಿ.ಟಿ. ಪ್ರಕಾಶ ಬಿನ್ ಲೇ: ತಿರುಮಲರಾವ್ | 0–0೨ | – | 0–0೨ | ಖುಷ್ಕಿ | 0–0೨ | ೨೦೬/೩ | ೨೦೬/1 | ೨೦೬/೨ ಉಳಿಕೆ | ೨೦೬/೨ ಉಳಿಕೆ |
| 8 | ೨೦೬/೩ | ಕೆಂಚೇಗೌಡ ಬಿನ್ ಕುಳ್ಳಮರೀಗೌಡ, ಕೋಟೆ ಬೀರಮ್ಮ ಬಿನ್ ಸಾಕಮ್ಮ ಸಾಕಮ್ಮ ಕೋಂ ಲೇ: ಮರೀಗೌಡ | 0–05 | – | 0–05 | ಖುಷ್ಕಿ | 0–06 | ೨೦೬/4 | ೨೦೬/1 | ೨೦೬/೩ ಉಳಿಕೆ | ೨೦೬/೩ ಉಳಿಕೆ |
| ೯ | ೨೦೬/4 | ಡಿ.ಟಿ. ಪ್ರಕಾಶ ಬಿನ್ ಲೇ: ತಿರುಮಲರಾವ್ | 0–0೩ | – | 0–0೩ | ಖುಷ್ಕಿ | 0–0೩ | ೨೦೬/5 | ೨೦೬/೩ | ೨೦೬/4 ಉಳಿಕೆ | ೨೦೬/5 |
| 10 | ೨೦೬/5 | ಡಿ.ಟಿ. ಪ್ರಕಾಶ ಬಿನ್ ಲೇ: ತಿರುಮಲರಾವ್ | 0–06 | – | 0–06 | ಖುಷ್ಕಿ | 0–08 | ೨೦೭/4 | ೨೦೬/4 | ೨೦೬/5 | ೨೦೬/5 |
| 11 | ೨೦೭/4 | ಕೆ. ಕೋಟಯ್ಯ ಬಿನ್ ಕೋಟೇಗೌಡ | 0–04 1/೨ | – | 0–04 1/೨ | ಖುಷ್ಕಿ | 0–05 | ೨೦೭/5 | ೨೦೬/5 | ೨೦೭/4 | ೨೦೭ ಉಳಿಕೆ |
| 1೨ | ೨೦೭/5 | ಡಿ.ಟಿ. ಪ್ರಕಾಶ ಬಿನ್ ಲೇ: ತಿರುಮಲರಾವ್ | 0–01 1/೨ | – | 0–01 1/೨ | ಖುಷ್ಕಿ | 0–0೨ | ೨೦೭/5 ಉಳಿಕೆ | ೨೦೭/4 | ೨೦೭/5 ಉಳಿಕೆ | ರಸ್ತೆ |
| 1೩ | | ರೈಲ್ವೆ ಪ್ರದೇಶ | 0–05 | 0–05 | – | – | – | ೨೦೨ | ೨೦1 | ರೈಲ್ವೆ ಹಳಿ | ರೈಲ್ವೆ ಹಳಿ |
| | | ಒಟ್ಟು | 1–೨೯ 1/೨ | 0–10 | 1–1೯ 1/೨ | | | | | | |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಂ. ವೀರಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ (ಕೈ.ಅ.), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

# ವಿಶೇಷ ಪತ್ರಿಕೆ

| ಭಾಗ–III | ಬೆಂಗಳೂರು, ಶನಿವಾರ, ಫೆಬ್ರವರಿ ೨೮, ೨೦೦೯ (ಫಾಲ್ಗುಣ ೯, ಶಕ ವರ್ಷ ೧೯೩೦) | ನಂ. ೧೧೧ |
|---|---|---|

**ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ**

**ಅಧಿಸೂಚನೆ – 1**

**ಸಂಖ್ಯೆ : ಸಿಐ 508 ಎಸ್‌ಪಿಕ್ಯೂ 2008, ಬೆಂಗಳೂರು, ದಿನಾಂಕ : 28ನೇ ಫೆಬ್ರವರಿ, 2009**

1966ರ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಅಧಿನಿಯಮದ (1966ರ ಕರ್ನಾಟಕ ಕಾಯ್ದೆ ಸಂಖ್ಯೆ 18) ಕಲಂ 3(1) ರಲ್ಲಿ ವಿಹಿತವಾಗಿರುವ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ರಾಜ್ಯ ಸರ್ಕಾರವು ಈ ಕೆಳಗಿನ ಷೆಡ್ಯೂಲಿನ ಅಂಕಣ 3ರಲ್ಲಿ ಕಾಣಿಸಿರುವ ಸರ್ವೆ ನಂಬರ್‌ಗಳಿಗೆ ಹೊಂದಿಕೊಂಡಂತೆ ಅಂಕಣ 4ರಲ್ಲಿ ನಮೂದಿಸಿರುವ ವಿಸ್ತೀರ್ಣವನ್ನು ಒಳಗೊಂಡ ಪ್ರದೇಶವನ್ನು ಮೇಲ್ಕಂಡ ಕಾಯ್ದೆಯ ಉದ್ದೇಶಗಳಿಗಾಗಿ ಕೈಗಾರಿಕಾ ಪ್ರದೇಶವಾಗತಕ್ಕದೆಂದು ಈ ಮೂಲಕ ಘೋಷಿಸಿದೆ ಮತ್ತು ಅದರ ಎಲ್ಲೆ ಅಂಕಣ 3ರಲ್ಲಿ ಕಾಣಿಸಿರುವ ಸಂಬಂಧಪಟ್ಟ ದಾಖಲೆಯಂತಿರುವುದು.

**ಷೆಡ್ಯೂಲ್**

**ಗ್ರಾಮ: 65-ಬಜ್ಪೆ** **ಹೋಬಳಿ: ಸುರತ್ಕಲ್** **ತಾಲ್ಲೂಕು: ಮಂಗಳೂರು** **ಜಿಲ್ಲೆ: ದ.ಕ**

| ಕ್ರ. ಸಂ | ಗ್ರಾಮದ ಹೆಸರು | ಸ.ನಂಬ್ರ | ಸ್ವಾಧೀನ ಪಡಿಸಿಕೊಳ್ಳುತ್ತಿರುವ ಜಮೀನಿನ ವಿವರ | | ಸ ರ ಹ ದ್ದು | | | | ಷರಾ |
|---|---|---|---|---|---|---|---|---|---|
| | | | ಖಾಸಗಿ ವಿಸ್ತೀರ್ಣ ಎ.ಸೆಂ | ಸರಕಾರಿ ವಿಸ್ತೀರ್ಣ ಎ.ಸೆಂ | ಉತ್ತರ | ಪೂರ್ವ | ದಕ್ಷಿಣ | ಪಶ್ಚಿಮ | |
| 1 | 2 | 3 | 4ಎ | 4ಬಿ | 5ಎ | 5ಬಿ | 5ಸಿ | 5ಡಿ | 6 |
| 1 | 65-ಬಜ್ಪೆ | 172/1ಎ | 0.57 | - | 152 | 172/1ಬಿ | 172/2ಎ | 139 | |
| 2 | " | 172/1ಬಿ | 3.01 | - | 152 | 173 | 172/2ಎ | 172/1ಎ | |
| 3 | " | 172/2ಎ | 0.60 | 0.97 | 172/1ಎ<br>172/1ಬಿ | 173 | 172/2ಬಿ | 139 | ಅನಾಧೀನ |
| | | | **4.18** | **0.97** | | | | | |

| ಘೋ ಷ್ವಾ ರೆ | | | |
|---|---|---|---|
| ಗ್ರಾಮ | ಅಧಿಸೂಚನೆ ಹೊರಡಿಸ ಬೇಕಾದ ಜಮೀನಿನ ವಿವರ | | ಒಟ್ಟು ವಿಸ್ತೀರ್ಣ (ಎ.ಸೆಂ) |
| | ಖಾಸಗಿ ವಿಸ್ತೀರ್ಣ (ಎ.ಸೆಂ) | ಸರಕಾರಿ ವಿಸ್ತೀರ್ಣ (ಎ.ಸೆಂ) | |
| 65-ಬಜ್ಪೆ | **4.18** | **0.97** | **5.15** |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಂ. ವೀರಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ (ಕೈ.ಅ.), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

**ಅಧಿಸೂಚನೆ – 2**

**ಸಂಖ್ಯೆ : ಸಿಐ 508 ಎಸ್‌ಪಿಕ್ಯೂ 2008, ಬೆಂಗಳೂರು, ದಿನಾಂಕ : 28ನೇ ಫೆಬ್ರವರಿ, 2009**

1966ರ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಅಧಿನಿಯಮದ (1966ರ ಕರ್ನಾಟಕ ಕಾಯ್ದೆ ಸಂಖ್ಯೆ 18) ಕಲಂ 1(3) ನೇ ಉಪಬಂಧದನ್ವಯ ವಿಹಿತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ರಾಜ್ಯ ಸರ್ಕಾರವು ಈ ಕೆಳಗಿನ ಶೆಡ್ಯೂಲಿನ ಅಂಕಣ 3ರಲ್ಲಿ ನಮೂದಿಸಿರುವ ಸರ್ವೇ ನಂಬರುಗಳಿಗೆ ಅಂಕಣ 4ರಲ್ಲಿ ವಿಹಿತವಾದ ವಿಸ್ತೀರ್ಣ ಮತ್ತು ಅಂಕಣ 5ರಲ್ಲಿ ವಿವರಿಸಿರುವ ಚಕ್ಕುಬಂದಿಯನ್ನೊಳಗೊಂಡ ಪ್ರದೇಶಕ್ಕೆ ಮೇಲಿನ ಅಧಿನಿಯಮದ 7ನೇ ಅಧ್ಯಾಯದ ಉಪಬಂಧಗಳು ಈ ಅಧಿಸೂಚನೆಯ ದಿನಾಂಕದಿಂದ ಜಾರಿಗೆ ಬರತಕ್ಕದ್ದೆಂದು ಈ ಮೂಲಕ ಘೋಷಿಸಿದೆ.

ಷೆಡ್ಯೂಲ್

**ಗ್ರಾಮ: 65-ಬಜ್ಪೆ** **ಹೋಬಳಿ: ಸುರತ್ಕಲ್** **ತಾಲ್ಲೂಕು: ಮಂಗಳೂರು** **ಜಿಲ್ಲೆ: ದ.ಕ**

| ಕ್ರ. ಸಂ | ಗ್ರಾಮದ ಹೆಸರು | ಸ.ನಂಬ್ರ | ಸ್ವಾಧೀನ ಪಡಿಸಿಕೊಳ್ಳುತ್ತಿರುವ ಜಮೀನಿನ ವಿವರ | | ಸ ರ ಹ ದ್ದು | | | | ಷರಾ |
|---|---|---|---|---|---|---|---|---|---|
| | | | ಖಾಸಗಿ ವಿಸ್ತೀರ್ಣ ಎ.ಸೆಂ | ಸರಕಾರಿ ವಿಸ್ತೀರ್ಣ ಎ.ಸೆಂ | ಉತ್ತರ | ಪೂರ್ವ | ದಕ್ಷಿಣ | ಪಶ್ಚಿಮ | |
| 1 | 2 | 3 | 4ಎ | 4ಬಿ | 5ಎ | 5ಬಿ | 5ಸಿ | 5ಡಿ | 6 |
| 1 | 65-ಬಜ್ಪೆ | 172/1ಎ | 0.57 | - | 152 | 172/1ಬಿ | 172/2ಎ | 139 | |
| 2 | " | 172/1ಬಿ | 3.01 | - | 152 | 173 | 172/2ಎ | 172/1ಎ | |
| 3 | " | 172/2ಎ | 0.60 | 0.97 | 172/1ಎ<br>172/1ಬಿ | 173 | 172/2ಬಿ | 139 | ಅನಾಧೀನ |
| | | | **4.18** | **0.97** | | | | | |

| ಘೋ ಷ್ವಾ ರೆ | | | |
|---|---|---|---|
| ಗ್ರಾಮ | ಅಧಿಸೂಚನೆ ಹೊರಡಿಸ ಬೇಕಾದ ಜಮೀನಿನ ವಿವರ | | ಒಟ್ಟು ವಿಸ್ತೀರ್ಣ (ಎ.ಸೆಂ) |
| | ಖಾಸಗಿ ವಿಸ್ತೀರ್ಣ (ಎ.ಸೆಂ) | ಸರಕಾರಿ ವಿಸ್ತೀರ್ಣ (ಎ.ಸೆಂ) | |
| 65-ಬಜ್ಪೆ | **4.18** | **0.97** | **5.15** |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ.ಎಂ. ವೀರಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ (ಕೈ.ಅ.)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

**1966ರ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಅಧಿನಿಯಮ ಕಲಂ 28(1)ರ ಅನ್ವಯ ಅಧಿಸೂಚನೆ**
**ಸಂಖ್ಯೆ : ಸಿಐ 508 ಎಸ್‌ಪಿಕ್ಯೂ 2008, ಬೆಂಗಳೂರು, ದಿನಾಂಕ : 28ನೇ ಫೆಬ್ರವರಿ, 2009**

ಈ ಕೆಳಗೆ ಅನುಸೂಚಿಯಲ್ಲಿ ನಮೂದಿಸಿರುವ ಜಮೀನುಗಳು ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿಗೆ ಮಂಗಳೂರು ವಿಶೇಷ ಆರ್ಥಿಕ ವಲಯದ ಮೈನ್ ರಿಸೀವಿಂಗ್ ಸಬ್ ಸ್ಟೇಶನ್ (ಎಂ.ಆರ್.ಎಸ್) ಉದ್ದೇಶಕ್ಕಾಗಿ ಬೇಕಾಗಿದೆ ಎಂಬುದಾಗಿ ಕರ್ನಾಟಕ ಸರ್ಕಾರವು ಅಭಿಪ್ರಾಯ ಪಟ್ಟಿದೆ.

ಆದುದರಿಂದ ಈಗ 1966ರ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯ್ದೆಯ (1966ರ ಕರ್ನಾಟಕ ರಾಜ್ಯ ಕಾಯ್ದೆ ಸಂಖ್ಯೆ 18) ಕಲಂ 28ರ ಉಪ ಕಲಂ (1)ರ ಪ್ರಕಾರ ದತ್ತವಾದ ಅಧಿಕಾರ ಚಲಾಯಿಸಿ ಕರ್ನಾಟಕ ಸರ್ಕಾರವು ಸದರಿ ಜಮೀನುಗಳನ್ನು ಸ್ವಾಧೀನ ಪಡಿಸಿಕೊಳ್ಳುವ ಉದ್ದೇಶದಿಂದ ಈ ನೋಟೀಸನ್ನು ಪ್ರಕಟಿಸಿದೆ.

ಮೇಲ್ಕಂಡ ಕಾಯ್ದೆಯ ಕಲಂ 35ರಲ್ಲಿ ಕಾಣಿಸಿರುವ ಉದ್ದೇಶಕ್ಕೆ ಸದರಿ ಭೂಮಿಗೆ ಪ್ರವೇಶಿಸಿರುವ ಯಾವುದೇ ವ್ಯಕ್ತಿಗೆ ಅಡ್ಡಿಪಡಿಸಕೂಡದೆಂದು ಅಥವಾ ತಡೆಯುಂಟು ಮಾಡಕೂಡದೆಂದು ಸದರಿ ಜಮೀನುಗಳಲ್ಲಿ ಆಸಕ್ತಿ ಹೊಂದಿರುವ ಎಲ್ಲಾ ವ್ಯಕ್ತಿಗಳಿಗೂ ಈ ಮೂಲಕ ಎಚ್ಚರಿಸಲಾಗಿದೆ. ಈ ಅಧಿಸೂಚನೆ ಪ್ರಕಟಣೆಯಾದ ದಿನಾಂಕದ ನಂತರ ಕರ್ನಾಟಕದ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿಯ ಮಂಗಳೂರು ವಿಭಾಗೀಯ ವಿಶೇಷ ಭೂಸ್ವಾಧೀನಾಧಿಕಾರಿಯವರ ಅನುಮತಿ ಇಲ್ಲದೆ ಸದರಿ ಜಮೀನುಗಳನ್ನು ಒಪ್ಪಂದ, ಕ್ರಯ, ಆಧಾರ, ಭೋಗ್ಯ, ಗುತ್ತಿಗೆ, ಅದಲುಬದಲು ಅಥವಾ ಮತ್ತಾವುದೇ ರೀತಿಯಲ್ಲಿ ವಿಲೇವಾರಿ ಮಾಡುವಂತಿಲ್ಲ ಮತ್ತು ಕಟ್ಟಡಗಳ ನಿರ್ಮಾಣ ಅಥವಾ ಮತ್ತಿತರ ಯಾವುದೇ ಅಭಿವೃದ್ಧಿ ಕೆಲಸಗಳನ್ನು ಮಾಡಕೂಡದು. ಹಾಗೆ ಮಾಡಿದ್ದಲ್ಲಿ 1894 ರ ಭೂಸ್ವಾಧೀನಾತಿ ಕಾಯ್ದೆಯ ಕಲಂ 24 (ಖಂಡ 7)ರ ಅನ್ವಯ (1894ರ ಕೇಂದ್ರ ಕಾಯ್ದೆ 1) 1961ರ ಕರ್ನಾಟಕ ಕಾಯ್ದೆ 17 ರಲ್ಲಿ ತಿದ್ದುಪಡಿಯಾದಂತೆ ಮತ್ತು 1966 ರ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಅಧಿನಿಯಮದ ವಿಧಿ 30 ರನ್ವಯ ಅಂತಿಮವಾಗಿ ಭೂಸ್ವಾಧೀನ ಪಡಿಸಿಕೊಂಡು ಪರಿಹಾರ ನಿಗಧಿಪಡಿಸುವಾಗ ಗಣನೆಗೆ ತೆಗೆದುಕೊಳ್ಳಲಾಗುವುದಿಲ್ಲ. ಸದರಿ ಜಮೀನುಗಳ ನಕಾಶೆಯನ್ನು ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿಯ ಮಂಗಳೂರು ವಿಭಾಗೀಯ ವಿಶೇಷ ಭೂಸ್ವಾಧೀನಾಧಿಕಾರಿಯವರ ಕಛೇರಿಯಲ್ಲಿ ಪರಿಶೀಲನೆಗೆ ಇಟ್ಟಿದೆ.

**ಅನುಸೂಚಿ**

**ಗ್ರಾಮ: 65-ಬಜ್ಪೆ** **ಹೋಬಳಿ: ಸುರತ್ಕಲ್** **ತಾಲ್ಲೂಕು: ಮಂಗಳೂರು** **ಜಿಲ್ಲೆ: ದಕ್ಷಿಣ ಕನ್ನಡ**

| ಕ್ರ. ಸಂ | ಖಾತೆದಾರರ ಹೆಸರು | ಅನುಭವದಾರರ ಹೆಸರು | ತರಹೆ | ಸ.ನಂಬ್ರ | ಗ ಡಿ ಗ ಳು | | | | ಸ್ವಾಧೀನ ಪಡಿಸಿಕೊಳ್ಳುತ್ತಿರುವ ಜಮೀನಿನ ವಿವರ | | ಆಕಾರ ರೂ.ಪೈ. |
|---|---|---|---|---|---|---|---|---|---|---|---|
| | | | | | ಉತ್ತರ | ಪೂರ್ವ | ದಕ್ಷಿಣ | ಪಶ್ಚಿಮ | ಖಾಸಗಿ ವಿಸ್ತೀರ್ಣ ಎ.ಸೆಂ | ಸರಕಾರಿ ವಿಸ್ತೀರ್ಣ ಎ.ಸೆಂ | |
| 1 | 2 | 3 | 4 | 5 | 6ಎ | 6ಬಿ | 6ಸಿ | 6ಡಿ | 7ಎ | 7ಬಿ | 8 |
| 1 | ಸುಧಾಕರ ಶೆಟ್ಟಿ ಬಿನ್ ರಾಮಣ್ಣ ಶೆಟ್ಟಿ | ಕಲಂ 2 ರಂತೆ | ಖುಷ್ಕಿ | 172/1ಎ | 152 | 172/1ಬಿ | 172/2ಎ | 139 | 0.57 | – | 0.46 |
| 2 | ಪುಷ್ಪಾವತಿ ಕೋಂ ವೈಂದ ಶೆಟ್ಟಿ | ಕಲಂ 2 ರಂತೆ | ಖುಷ್ಕಿ | 172/1ಬಿ | 152 | 173 | 172/2ಎ | 172/1ಎ | 3.01 | – | 2.41 |
| 3 | ಸರಕಾರ (ಅನಾಧೀನ) ಶ್ರೀಮತಿ ವೇದಾವತಿ ಕೋಂ ಜಯಂತ, ಶೋಭ ಬಾಲಕೃಷ್ಣ, ಲೂವೀಜಾ ಸಲ್ಡಾನ ಕೋಂ ಲೋರೆನ್ಸ್ ಸಲ್ಡಾನ, ಹರಿಣಾಕ್ಷಿ ಕೋಂ ಸುಧೀರ್, ಗೀತಾ ಕೋಂ ಬಾಬು, ಸವಿತ ಕೋಂ ಮೋಹನ, ಜಯಲಕ್ಷ್ಮೀ ಬಿನ್ ವಿಠಲ ಪೂಜಾರಿ, ಸುಶೀಲ ಕೋಂ ಸುಂದರ ಪೂಜಾರಿ, ಕಲಾವತಿ ಕೋಂ ರವೀಂದ್ರ ಶೆಟ್ಟಿ, ಚೆನ್ನಮ್ಮ ಕೋಂ ದಿ। ಚೆನ್ನಯ್ಯ ಪೂಜಾರಿ, ಮಹಾಬಲ ಪೂಜಾರಿ ಬಿನ್ ನಾರ್ಣ ಪೂಜಾರಿ, ರೀಟಾ ಪ್ರೊಟೆಲ್ ಕೋಂ ನೆಲ್ಸನ್ ಪ್ರೊಟೆಲ್, ರೇವತಿ ಶೆಟ್ಟಿ ಕೋಂ ಶಾಂತಪ್ಪ ಶೆಟ್ಟಿ, ಶ್ರೀಮತಿ ಅನಿತ ಕೋಂ ಆನಂದ, ಸಿಬಲ್ ಡಿಸೋಜ ಕೋಂ ರೋಬಿನ್ ಡಿಸೋಜ, | ಕಲಂ 2 ರಂತೆ ಎಂ.ಆರ್.286/2004-05 ಸಿಂಡಿಕೇಟ್ ಬ್ಯಾಂಕ್ ಬಜ್ಪೆ ಇವರಿಗೆ ಆಧಾರ, ಎಂ.ಆರ್.293/2004-05 ಸಿಂಡಿಕೇಟ್ ಬ್ಯಾಂಕ್ ಬಜ್ಪೆ ಇವರಿಗೆ ಆಧಾರ, ಎಂ.ಆರ್.294/2004-05 ಸಿಂಡಿಕೇಟ್ ಬ್ಯಾಂಕ್ ಬಜ್ಪೆ ಇವರಿಗೆ ಆಧಾರ, ಎಂ.ಆರ್.290/2004-05 ಸಿಂಡಿಕೇಟ್ ಬ್ಯಾಂಕ್ ಬಜ್ಪೆ ಇವರಿಗೆ ಆಧಾರ, | ಖುಷ್ಕಿ | 172/2ಎ | 172/1ಎ 172/1ಬಿ | 173 | 172/2ಬಿ | 139 | 0.60 | 0.97 | 1.26 |

| | | | | | | | | | | | |
|---|---|---|---|---|---|---|---|---|---|---|---|
| | ಕವಿತಾ ಕೋಂ ಸುಧಾಕರ ಶೆಟ್ಟಿ, ಶಿವರಾಮ ಕೆ. ಬಿನ್ ಕೆ.ಎಲ್.ದೇಜು, ಇಂದಿರಾ ಕೋಂ ರಾಮ ಪೂಜಾರಿ, ಹರೀಶ್ ಮುಗೇರ ಬಿನ್ ವೆಂಕಟ ಮುಗೇರ, ಸರೋಜ ಬಿನ್ ಪವಿತ್ರ. | ಎಂ.ಆರ್.137/2005–06 ಸಿಂಡಿಕೇಟ್ ಬ್ಯಾಂಕ್ ಬಜ್ಪೆ ಇವರಿಗೆ ಆಧಾರ | | | | | | | | | |
| | | | | | | | | | 4.18 | 0.97 | |

| ಘೋ ಷ್ವಾ ರೆ | | | |
|---|---|---|---|
| ಗ್ರಾಮ | ಅಧಿಸೂಚನೆ ಹೊರಡಿಸ ಬೇಕಾದ ಜಮೀನಿನ ವಿವರ | | ಒಟ್ಟು ವಿಸ್ತೀರ್ಣ (ಎ.ಸೆಂ) |
| | ಖಾಸಗಿ ವಿಸ್ತೀರ್ಣ (ಎ.ಸೆಂ) | ಸರಕಾರಿ ವಿಸ್ತೀರ್ಣ (ಎ.ಸೆಂ) | |
| 65–ಬಜ್ಪೆ | 4.18 | 0.97 | 5.15 |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ.ಎಂ. ವೀರಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ (ಕೈ.ಅ.), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

**ವಿಶೇಷ ಪತ್ರಿಕೆ**

| ಭಾಗ - III | **ಬೆಂಗಳೂರು, ಶನಿವಾರ, ಫೆಬ್ರವರಿ ೨೮, ೨೦೦೯ (ಫಾಲ್ಗುಣ ೯, ಶಕ ವರ್ಷ ೧೯೩೦)** | ನಂ. ೧೧೨ |
|---|---|---|

**ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ**

**1966ರ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯ್ದೆಯ ಕಲಂ 28(4)ರ ಅಧಿಸೂಚನೆ**

**ಸಂಖ್ಯೆ: ಸಿಐ 10 ಎಸ್‌ಪಿಕ್ಯೂ 2009, ಬೆಂಗಳೂರು, ದಿನಾಂಕ, 28ನೇ ಫೆಬ್ರವರಿ, 2009**

ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯಿದೆ (ಕರ್ನಾಟಕ ಕಾಯ್ದೆ 1966) (ಈ ಮುಂದೆ ಪ್ರಸ್ತುತ ಕಾಯಿದೆ ಎಂದು ಹೇಳಲಾಗಿದೆ) ಕಲಂ 28(1) ರನ್ವಯ ವಿಹಿತವಾಗಿರುವ ಅಧಿಕಾರದಡಿ ಅಧಿಸೂಚನೆ ನಂಬರ್ ಸಿಐ 124 ಎಸ್‌ಪಿಕ್ಯೂ 2008, ಬೆಂಗಳೂರು, ದಿನಾಂಕ : 8-4-2008 (ಈ ಮುಂದೆ ಅಧಿಸೂಚನೆ ಎಂದು ಹೇಳಲಾಗಿದೆ) ರಂದು ಹೊರಡಿಸಿದೆ. ದಿನಾಂಕ : 8-4-2008 ರಂದು ಪ್ರಕಟವಾದ ಕರ್ನಾಟಕ ರಾಜ್ಯ ಪತ್ರದ ಪುಟ ಸಂಖ್ಯೆ 1 ರಿಂದ 4 ರ ತನಕ ವಿಶೇಷ ಪತ್ರಿಕೆ ಭಾಗ-3 ರಲ್ಲಿ ಕರ್ನಾಟಕ ಸರಕಾರವು ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆಯ ಬಸ್ ನಿಲ್ದಾಣದ ಉದ್ದೇಶಕ್ಕಾಗಿ ಪ್ರಸ್ತುತ ಅಧಿಸೂಚನೆಯಲ್ಲಿ ಕಾಣಿಸಿರುವ ಜಮೀನುಗಳನ್ನು ಸ್ವಾಧೀನಪಡಿಸಿಕೊಳ್ಳಲು ತನ್ನ ಉದ್ದೇಶವನ್ನು ಪ್ರಕಟಿಸಿತ್ತು.

ಅದರಂತೆ ಪ್ರಸ್ತುತ ಕಾಯಿದೆಯನ್ವಯ ಕಲಂ 28ರ ಉಪಕಲಂ (3) ರನ್ವಯ ಆಜ್ಞೆಯನ್ನು ಹೊರಡಿಸಲಾಗಿದೆ ಮತ್ತು ಈ ಕೆಳಗೆ ಅನುಸೂಚಿಯಲ್ಲಿ ಕಾಣಿಸಿರುವ ಜಮೀನುಗಳು ಪ್ರಸ್ತುತ ಅಧಿಸೂಚನೆಯಲ್ಲಿಯೂ ಕಾಣಿಸಲ್ಪಟ್ಟಿದೆ ಹಾಗೂ ಪ್ರಸ್ತುತ ಅಧಿಸೂಚನೆಯಲ್ಲಿ ಕಾಣಿಸಿರುವ ಉದ್ದೇಶಕ್ಕಾಗಿ ಸ್ವಾಧೀನ ಪಡಿಸಿಕೊಳ್ಳಬೇಕೆಂದು ಕರ್ನಾಟಕ ಸರಕಾರಕ್ಕೆ ಮನವರಿಕೆಯಾಗಿದೆ.

ಆದುದರಿಂದ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯಿದೆ 1966 (ಕರ್ನಾಟಕ ಕಾಯಿದೆ 18:1966)ರ ಕಲಂ 28ರ ಉಪ ಕಲಂ (4) ರನ್ವಯ ವಿಹಿತವಾಗಿರುವ ಅಧಿಕಾರದ ಮೇರೆಗೆ ಅಧಿಸೂಚನೆಯಲ್ಲಿ ಕಾಣಿಸಿರುವ ಉದ್ದೇಶಕ್ಕಾಗಿ ಈ ಕೆಳಗೆ ಅನುಸೂಚಿಯಲ್ಲಿ ಕಾಣಿಸಿರುವ ಜಮೀನುಗಳನ್ನು ಸ್ವಾಧೀನ ಪಡಿಸಿಕೊಳ್ಳಬೇಕೆಂದು ಈ ಮೂಲಕ ಕರ್ನಾಟಕ ಸರ್ಕಾರವು ಘೋಷಿಸಿದೆ.

### ಅನುಸೂಚಿ

ಗ್ರಾಮ : ಕುಕ್ಲೂರು ಹೋಬಳಿ : ವಿರಾಜಪೇಟೆ ತಾಲ್ಲೂಕು : ವಿರಾಜಪೇಟೆ ಜಿಲ್ಲೆ : ಕೊಡಗು

| ಕ್ರ. ಸಂ | ಖಾತೆದಾರರ ಹೆಸರು | ಅನುಭವದಾರರ ಹೆಸರು | ತರಹೆ | ಸ.ನಂಬ್ರ | ಗ ಡಿ ಗ ಳು | | | | ಸ್ವಾಧೀನ ಪಡಿಸಿಕೊಳ್ಳುತ್ತಿರುವ ಜಮೀನಿನ ವಿವರ | | | ಆಕಾರ ರೂ.ಪೈ. |
|---|---|---|---|---|---|---|---|---|---|---|---|---|
| | | | | | ಉತ್ತರ | ಪೂರ್ವ | ದಕ್ಷಿಣ | ಪಶ್ಚಿಮ | ಐನ್ ಎ. ಗುಂ. | ಖರಾಬು ಎ. ಗುಂ. | ಬಾಕಿ ಎ. ಗುಂ. | |
| 1 | 2 | 3 | 4 | 5 | 6 | 7 | 8 | 9 | 10ಎ | 10ಬಿ | 10ಸಿ | 11 |
| 1 | ಸರಕಾರದವರು ಪಿ.ಬಿ. ಸೋಮಯ್ಯ | ಕಲಂ 2 ರಂತೆ | ತರಿ | 268 ಪಿ | ರಸ್ತೆ | 265/1 269, 275 | 268 ಪಿ | ರಸ್ತೆ | 4.13 | – | 4.13 | 73.40 |
| | | | | | | | | ಒಟ್ಟು | 4.13 | – | 4.13 | |

| ಘೋ ಷ್ವಾ ರೆ | | | |
|---|---|---|---|
| ಗ್ರಾಮದ ಹೆಸರು | ಅಧಿಸೂಚನೆ ಹೊರಡಿಸ ಬೇಕಾದ ಜಮೀನಿನ ವಿವರ | | |
| | ಐನ್ | ಖರಾಬು | ಬಾಕಿ |
| ಕುಕ್ಲೂರು | 4.13 | – | 4.13 |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಂ. ವೀರಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ (ಕೈ.ಅ.), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

## ವಿಶೇಷ ಪತ್ರಿಕೆ

| ಭಾಗ - III | ಬೆಂಗಳೂರು, ಶನಿವಾರ, ಫೆಬ್ರವರಿ ೨೮, ೨೦೦೯ (ಫಾಲ್ಗುಣ ೯, ಶಕ ವರ್ಷ ೧೯೩೦) | ನಂ. ೧೧೩ |
|---|---|---|

### ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

### 1966ರ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯ್ದೆಯ ಕಲಂ 28(4)ರ ಅಧಿಸೂಚನೆ

### ಸಂಖ್ಯೆ: ಸಿಐ 55 ಎಸ್‌ಪಿಕ್ಯೂ 2009, ಬೆಂಗಳೂರು, ದಿನಾಂಕ, 27ನೇ ಫೆಬ್ರವರಿ, 2009

ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯಿದೆ (ಕರ್ನಾಟಕ ಕಾಯ್ದೆ 1966) (ಈ ಮುಂದೆ ಪ್ರಸ್ತುತ ಕಾಯಿದೆ ಎಂದು ಹೇಳಲಾಗಿದೆ) ಕಲಂ 28(1) ರನ್ವಯ ವಿಹಿತವಾಗಿರುವ ಅಧಿಕಾರದಡಿ ಅಧಿಸೂಚನೆ ನಂಬರ್ ಸಿಐ 256 ಎಸ್‌ಪಿಕ್ಯೂ 2008, ಬೆಂಗಳೂರು, ದಿನಾಂಕ : 18-7-2008 (ಈ ಮುಂದೆ ಅಧಿಸೂಚನೆ ಎಂದು ಹೇಳಲಾಗಿದೆ) ರಂದು ಹೊರಡಿಸಿದೆ. ದಿನಾಂಕ : 18-7-2008 ರಂದು ಪ್ರಕಟವಾದ ಕರ್ನಾಟಕ ರಾಜ್ಯ ಪತ್ರದ ಪುಟ ಸಂಖ್ಯೆ 1 ರಿಂದ 4 ರ ತನಕ ವಿಶೇಷ ಪತ್ರಿಕೆ ಭಾಗ-3 ರಲ್ಲಿ ಕರ್ನಾಟಕ ಸರಕಾರವು ಕರ್ನಾಟಕ ಮೆ: ಎಸ್.ಟಿ.ಸಿ.ಎಲ್. ಸಂಸ್ಥೆಯ ಉದ್ದೇಶಕ್ಕಾಗಿ ಪ್ರಸ್ತುತ ಅಧಿಸೂಚನೆಯಲ್ಲಿ ಕಾಣಿಸಿರುವ ಜಮೀನುಗಳನ್ನು ಸ್ವಾಧೀನಪಡಿಸಿಕೊಳ್ಳಲು ತನ್ನ ಉದ್ದೇಶವನ್ನು ಪ್ರಕಟಿಸಿತ್ತು.

ಅದರಂತೆ ಪ್ರಸ್ತುತ ಕಾಯಿದೆಯನ್ವಯ ಕಲಂ 28ರ ಉಪಕಲಂ (3) ರನ್ವಯ ಆಜ್ಞೆಯನ್ನು ಹೊರಡಿಸಲಾಗಿದೆ ಮತ್ತು ಈ ಕೆಳಗೆ ಅನುಸೂಚಿಯಲ್ಲಿ ಕಾಣಿಸಿರುವ ಜಮೀನುಗಳು ಪ್ರಸ್ತುತ ಅಧಿಸೂಚನೆಯಲ್ಲಿಯೂ ಕಾಣಿಸಲ್ಪಟ್ಟಿದೆ ಹಾಗೂ ಪ್ರಸ್ತುತ ಅಧಿಸೂಚನೆಯಲ್ಲಿ ಕಾಣಿಸಿರುವ ಉದ್ದೇಶಕ್ಕಾಗಿ ಸ್ವಾಧೀನ ಪಡಿಸಿಕೊಳ್ಳಬೇಕೆಂದು ಕರ್ನಾಟಕ ಸರಕಾರಕ್ಕೆ ಮನವರಿಕೆಯಾಗಿದೆ.

ಆದುದರಿಂದ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯಿದೆ 1966 (ಕರ್ನಾಟಕ ಕಾಯಿದೆ 18:1966)ರ ಕಲಂ 28ರ ಉಪ ಕಲಂ (4) ರನ್ವಯ ವಿಹಿತವಾಗಿರುವ ಅಧಿಕಾರದ ಮೇರೆಗೆ ಅಧಿಸೂಚನೆಯಲ್ಲಿ ಕಾಣಿಸಿರುವ ಉದ್ದೇಶಕ್ಕಾಗಿ ಈ ಕೆಳಗೆ ಅನುಸೂಚಿಯಲ್ಲಿ ಕಾಣಿಸಿರುವ ಜಮೀನುಗಳನ್ನು ಸ್ವಾಧೀನ ಪಡಿಸಿಕೊಳ್ಳಬೇಕೆಂದು ಈ ಮೂಲಕ ಕರ್ನಾಟಕ ಸರ್ಕಾರವು ಘೋಷಿಸಿದೆ.

**ಅನುಸೂಚಿ**

**ಗ್ರಾಮ : ಅಭ್ಯೈತ್ ಮಂಗಲ** **ಹೋಬಳಿ : ಕುಶಾಲನಗರ** **ತಾಲ್ಲೂಕು : ಸೋಮವಾರಪೇಟೆ** **ಜಿಲ್ಲೆ : ಕೊಡಗು**

| ಕ್ರ. ಸಂ | ಖಾತೆದಾರರ ಹೆಸರು | ಅನುಭವದಾರರ ಹೆಸರು | ತರಹೆ | ಸ.ನಂಬ್ರ | ಗಡಿಗಳು | | | | ಸ್ವಾಧೀನ ಪಡಿಸಿಕೊಳ್ಳುತ್ತಿರುವ ವಿಸ್ತೀರ್ಣ | | | ಆಕಾರ ರೂ.ಪೈ. |
|---|---|---|---|---|---|---|---|---|---|---|---|---|
| | | | | | ಉತ್ತರ | ಪೂರ್ವ | ದಕ್ಷಿಣ | ಪಶ್ಚಿಮ | ಐನ್ ಎ. ಗುಂ. | ಖರಾಬು ಎ. ಗುಂ. | ಬಾಕಿ ಎ. ಗುಂ. | |
| 1 | 2 | 3 | 4 | 5 | 6 | 7 | 8 | 9 | 10ಎ | 10ಬಿ | 10ಸಿ | 11 |
| 1 | ಅಂಚೆ ಮನೆ ನಾಗಣ್ಣ | 1) ಟಿ.ಪಿ.ಪಿ. ಅಬ್ದುಲ್ ರಾವೂಸ್ ಹಾಜಿ 2) ಸಿ.ಕೆ. ನಜೀಬ್ | ಜಮ್ಮ ಹಿತ್ಲು | 48 | 48 | 47/1 | 47/1 | 47/1 | 0.55 | – | 0.55 | – |
| | | | | | | | | ಒಟ್ಟು | 0.55 | – | 0.55 | |

| ಘೋ ಷ್ವಾ ರೆ | | | |
|---|---|---|---|
| ಗ್ರಾಮದ ಹೆಸರು | ಭೂಸ್ವಾಧೀನ ಪಡಿಸಿಕೊಳ್ಳಬೇಕಾದ ಜಮೀನಿನ ವಿಸ್ತೀರ್ಣ (ಎ. ಸೆಂ.) | | |
| | ಐನ್ | ಖರಾಬು | ಬಾಕಿ |
| ಅಭ್ಯೈತ್ ಮಂಗಲ | 0.55 | – | 0.55 |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಂ. ವೀರಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ (ಕೈ.ಅ.), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

**1966ರ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯ್ದೆಯ ಕಲಂ 28(4)ರ ಅಧಿಸೂಚನೆ**

**ಸಂಖ್ಯೆ: ಸಿಐ 55 ಎಸ್‌ಪಿಕ್ಯೂ 2009, ಬೆಂಗಳೂರು, ದಿನಾಂಕ, 27ನೇ ಫೆಬ್ರವರಿ, 2009**

ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯಿದೆ (ಕರ್ನಾಟಕ ಕಾಯ್ದೆ 1966) (ಈ ಮುಂದೆ ಪ್ರಸ್ತುತ ಕಾಯಿದೆ ಎಂದು ಹೇಳಲಾಗಿದೆ) ಕಲಂ 28(1) ರನ್ವಯ ವಿಹಿತವಾಗಿರುವ ಅಧಿಕಾರದಡಿ ಅಧಿಸೂಚನೆ ನಂಬರ್ ಸಿಐ 288 ಎಸ್‌ಪಿಕ್ಯೂ 2006, ಬೆಂಗಳೂರು, ದಿನಾಂಕ : 31-8-2006 (ಈ ಮುಂದೆ ಅಧಿಸೂಚನೆ ಎಂದು ಹೇಳಲಾಗಿದೆ) ರಂದು ಹೊರಡಿಸಿದೆ. ದಿನಾಂಕ : 31-8-2008 ರಂದು ಪ್ರಕಟವಾದ ಕರ್ನಾಟಕ ರಾಜ್ಯ ಪತ್ರದ ಪುಟ ಸಂಖ್ಯೆ 1 ರಿಂದ 3 ರ ತನಕ ವಿಶೇಷ ಪತ್ರಿಕೆ ಭಾಗ-3 ರಲ್ಲಿ ಸರಕಾರವು ಕರ್ನಾಟಕ ಮೆ: ಎಸ್.ಟಿ.ಸಿ.ಎಲ್. ಸಂಸ್ಥೆಯ ಉದ್ದೇಶಕ್ಕಾಗಿ ಪ್ರಸ್ತುತ ಅಧಿಸೂಚನೆಯಲ್ಲಿ ಕಾಣಿಸಿರುವ ಜಮೀನುಗಳನ್ನು ಸ್ವಾಧೀನಪಡಿಸಿಕೊಳ್ಳಲು ತನ್ನ ಉದ್ದೇಶವನ್ನು ಪ್ರಕಟಿಸಿತ್ತು.

ಅದರಂತೆ ಪ್ರಸ್ತುತ ಕಾಯಿದೆಯನ್ವಯ ಕಲಂ 28ರ ಉಪಕಲಂ (3) ರನ್ವಯ ಆಜ್ಞೆಯನ್ನು ಹೊರಡಿಸಲಾಗಿದೆ ಮತ್ತು ಈ ಕೆಳಗೆ ಅನುಸೂಚಿಯಲ್ಲಿ ಕಾಣಿಸಿರುವ ಜಮೀನುಗಳು ಪ್ರಸ್ತುತ ಅಧಿಸೂಚನೆಯಲ್ಲಿಯೂ ಕಾಣಿಸಲ್ಪಟ್ಟಿದೆ ಹಾಗೂ ಪ್ರಸ್ತುತ ಅಧಿಸೂಚನೆಯಲ್ಲಿ ಕಾಣಿಸಿರುವ ಉದ್ದೇಶಕ್ಕಾಗಿ ಸ್ವಾಧೀನ ಪಡಿಸಿಕೊಳ್ಳಬೇಕೆಂದು ಕರ್ನಾಟಕ ಸರಕಾರಕ್ಕೆ ಮನವರಿಕೆಯಾಗಿದೆ.

ಆದುದರಿಂದ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯಿದೆ 1966 (ಕರ್ನಾಟಕ ಕಾಯಿದೆ 18:1966)ರ ಕಲಂ 28ರ ಉಪ ಕಲಂ (4) ರನ್ವಯ ವಿಹಿತವಾಗಿರುವ ಅಧಿಕಾರದ ಮೇರೆಗೆ ಅಧಿಸೂಚನೆಯಲ್ಲಿ ಕಾಣಿಸಿರುವ ಉದ್ದೇಶಕ್ಕಾಗಿ ಈ ಕೆಳಗೆ ಅನುಸೂಚಿಯಲ್ಲಿ ಕಾಣಿಸಿರುವ ಜಮೀನುಗಳನ್ನು ಸ್ವಾಧೀನ ಪಡಿಸಿಕೊಳ್ಳಬೇಕೆಂದು ಈ ಮೂಲಕ ಕರ್ನಾಟಕ ಸರ್ಕಾರವು ಘೋಷಿಸಿದೆ.

**ಅನುಸೂಚಿ**

**ಗ್ರಾಮ : ಅಭ್ಯೈತ್ ಮಂಗಲ** **ಹೋಬಳಿ : ಕುಶಾಲನಗರ** **ತಾಲ್ಲೂಕು : ಸೋಮವಾರಪೇಟೆ** **ಜಿಲ್ಲೆ : ಕೊಡಗು**

| ಕ್ರ. ಸಂ | ಖಾತೆದಾರರ ಹೆಸರು | ಅನುಭವದಾರರ ಹೆಸರು | ತರಹೆ | ಸ. ನಂಬ್ರ | ಗಡಿಗಳು | | | | ಸ್ವಾಧೀನ ಪಡಿಸಿಕೊಳ್ಳುತ್ತಿರುವ ಜಮೀನಿನ ವಿವರ | | | ಅಕಾರ ರೂ.ಪೈ. |
|---|---|---|---|---|---|---|---|---|---|---|---|---|
| | | | | | ಉತ್ತರ | ಪೂರ್ವ | ದಕ್ಷಿಣ | ಪಶ್ಚಿಮ | ಐನ್ ಎ. ಸೆಂ. | ಖರಾಬ ಎ. ಸೆಂ. | ಬಾಕಿ ಎ. ಸೆಂ. | |
| 1 | 2 | 3 | 4 | 5 | 6 | 7 | 8 | 9 | 10ಎ | 10ಬಿ | 10ಸಿ | 11 |
| 1 | ಟಿ.ಪಿ.ಪಿ. ಅಬ್ದುಲ್ ರಾವೊಸ್ ಹಾಜಿ ಬಿನ್ ಪಿ. ಅಬುಬಕರ್ | ಕಲಂ 2 ರಂತೆ | ಸಾಗು ಬಾಣೆ | 47/1ಎ1ಪಿ1 | 48 | 47/1 | ರಸ್ತೆ | 47/1 | 0.10 | – | 0.10 | 0.35 |
| 2 | ಸಿ.ಕೆ. ನಜೀಬ್ ಬಿನ್ ಕೆ.ವೈ. ಮಮ್ಮು | ಕಲಂ 2 ರಂತೆ | ಸಾಗು ಬಾಣೆ | 47/1ಎ1ಪಿ2 | 48 | 47/1 | ರಸ್ತೆ | 47/1 | 0.10 | – | 0.10 | 0.35 |
| | | | | | | | | ಒಟ್ಟು | 0.20 | – | 0.20 | |

| ಘೋ ಷ್ವಾ ರೆ | | | |
|---|---|---|---|
| ಗ್ರಾಮದ ಹೆಸರು | ಭೂಸ್ವಾಧೀನಪಡಿಸಿಕೊಳ್ಳಬೇಕಾದ ಜಮೀನಿನ ವಿಸ್ತೀರ್ಣ (ಎ. ಸೆಂ.) | | |
| | ಐನ್ | ಖರಾಬು | ಬಾಕಿ |
| ಅಭ್ಯೈತ್ ಮಂಗಲ | 0.20 | – | 0.20 |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಂ. ವೀರಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ (ಕೈ.ಅ.), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

# ವಿಶೇಷ ಪತ್ರಿಕೆ

ಭಾಗ - III | **ಬೆಂಗಳೂರು, ಶನಿವಾರ, ಫೆಬ್ರವರಿ ೨೮, ೨೦೦೯ (ಫಾಲ್ಗುಣ ೯, ಶಕ ವರ್ಷ ೧೯೩೦)** | ನಂ. ೧೧೪

**ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ**

**ವಿಧಿ 28(4)ರ ಅಧಿಸೂಚನೆ**

**ಸಂಖ್ಯೆ: ಸಿಐ 49 ಎಸ್‌ಪಿಕ್ಯೂ 2009, ಬೆಂಗಳೂರು, ದಿನಾಂಕ, 28ನೇ ಫೆಬ್ರವರಿ, 2009**

1966ರ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯ್ದೆಯ (1966ರ ಕರ್ನಾಟಕ ಕಾಯ್ದೆ ಸಂಖ್ಯೆ18) ವಿಧಿ 28(1)ರ ಪ್ರಕಾರ ದತ್ತವಾದ ಅಧಿಕಾರದ ಮೇರೆಗೆ ದಿನಾಂಕ : 20-5-2008 ರ ಅಧಿಸೂಚನೆ, ಕರ್ನಾಟಕ ವಿಶೇಷ ರಾಜ್ಯ ಪತ್ರ ಪುಟ ಸಂಖ್ಯೆ 1 ರಿಂದ 4 ರಲ್ಲಿ ಪ್ರಕಟವಾಗಿರುವ ಅಧಿಸೂಚನೆ ಸಂಖ್ಯೆ : ಸಿಐ 234 ಎಸ್.ಪಿ.ಕ್ಯೂ. 2008 ದಿನಾಂಕ : 19-5-2008 ರ ಭೂಸ್ವಾಧೀನಕ್ಕೆ ಒಳಪಟ್ಟ ಪ್ರದೇಶದ ಪ್ರಕಾರ ಸರ್ಕಾರ ಸದರಿ ಅಧಿಸೂಚನೆಯಲ್ಲಿ ನಮೂದಿಸಲ್ಪಟ್ಟಿರುವ ಜಮೀನುಗಳನ್ನು ಕೈಗಾರಿಕಾ ಪ್ರದೇಶದ ಸ್ಥಾಪನೆ ಮಾಡಿ ಅಭಿವೃದ್ಧಿ ಪಡಿಸುವ ಉದ್ದೇಶಕ್ಕಾಗಿ ಭೂಸ್ವಾಧೀನಪಡಿಸಿಕೊಳ್ಳಲು ಇಚ್ಛಿಪಟ್ಟಿದೆ.

ಮೇಲ್ಕಂಡ ಅಧಿಸೂಚನೆಯು ಷೆಡ್ಯೂಲ್‌ನಲ್ಲಿ ನಮೂದಿಸಲ್ಪಟ್ಟಿರುವ ಜಮೀನುಗಳನ್ನು ಪ್ರಕಟಿಸಲಾಗಿರುವ ಉದ್ದೇಶಕ್ಕಾಗಿ ಭೂಸ್ವಾಧೀನ ಪಡಿಸಿಕೊಳ್ಳಬೇಕಾಗಿರುವುದು ಕರ್ನಾಟಕ ಸರ್ಕಾರಕ್ಕೆ ಮನದಟ್ಟಾಗಿದೆ. ಈ ಬಗ್ಗೆ ಮೇಲ್ಕಂಡ ಕಾಯ್ದೆ ವಿಧಿ 28(3)ರ ಪ್ರಕಾರ ಅದೇಶ ಹೊರಡಿಸಲಾಗಿದೆ.

ಆದುದರಿಂದ ಈಗ 1966 ರ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯ್ದೆ ವಿಧಿ 28(4)ರ (1966ರ ಕರ್ನಾಟಕ ಕಾಯ್ದೆ ಸಂಖ್ಯೆ : 18)ರ ಮೇರೆಗೆ ದತ್ತವಾದ ಅಧಿಕಾರದ ಮೇರೆಗೆ ಕರ್ನಾಟಕ ಸರ್ಕಾರ ಕೆಳಗೆ ನಮೂದಿಸಿರುವ ಜಮೀನುಗಳನ್ನು ಅಧಿಸೂಚನೆಯಲ್ಲಿ ತಿಳಿಸಿರುವ ಉದ್ದೇಶಕ್ಕಾಗಿ ಭೂಸ್ವಾಧೀನಪಡಿಸಿಕೊಳ್ಳಲಾಗುವುದೆಂದು ಈ ಮೂಲಕ ಘೋಷಿಸಲಾಗಿದೆ.

**ಗ್ರಾಮ : ಅಗರ ಹೋಬಳಿ : ಕೆಂಗೇರಿ ತಾಲ್ಲೂಕು : ಬೆಂಗಳೂರು ದಕ್ಷಿಣ ಜಿಲ್ಲೆ : ಬೆಂಗಳೂರು**

| ಕ್ರ. ಸಂ. | ಖಾತೆದಾರರ ಹೆಸರು | ಅನುಭವದಾರರ ಹೆಸರು | ಸರ್ವೆ ನಂ. | ಭೂಸ್ವಾಧೀನಕ್ಕೊಳಪಟ್ಟ ವಿಸ್ತೀರ್ಣ | | | ತರಹೆ | ಆಕಾರ | ಚೆಕ್ಕುಬಂದಿ | | | |
|---|---|---|---|---|---|---|---|---|---|---|---|---|
| | | | | ಐನ್ ಎ–ಗು | ಖರಾಬು ಎ–ಗು | ಬಾಕಿ ಎ–ಗು | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ |
| 1 | ಲಕ್ಷ್ಮಮ್ಮ ಬಿನ್ ಮುನಿಹನುಮಯ್ಯ | ಲಕ್ಷ್ಮಮ್ಮ | 47/3 | 0–04 | – | 0–04 | ಖುಷ್ಕಿ | – | 47/3ರ ಉಳಿಕೆ | 47/2 | 47/4 | 47/2 |
| 2 | ಮೈಥಿಲಿ, ರಾಜಗೋಪಾಲ್ | ಮೈಥಿಲಿ, ರಾಜಗೋಪಾಲ್ | 47/4 | 0–06 | – | 0–06 | ಖುಷ್ಕಿ | – | 47/4ರ ಉಳಿಕೆ | 49 | 47/4ರ ಉಳಿಕೆ | 47/3 |
| | | | **ಒಟ್ಟು** | **0–10** | **–** | **0–10** | | | | | | |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಂ. ವೀರಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ (ಕೈ.ಅ.), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

## ವಿಶೇಷ ಪತ್ರಿಕೆ

**ಭಾಗ - III** | **ಬೆಂಗಳೂರು, ಸೋಮವಾರ, ಮಾರ್ಚ್ ೨, ೨೦೦೯ (ಫಾಲ್ಗುಣ ೧೧, ಶಕ ವರ್ಷ ೧೯೩೦)** | **ನಂ. ೧೧೬**

**ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ**

**1966ರ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯ್ದೆಯ ವಿಧಿ 3(1) ರಡಿ ಘೋಷಣೆ**

**ಸಂಖ್ಯೆ: ಸಿಐ 658 ಎಸ್‌ಪಿಕ್ಯೂ 2008, ಬೆಂಗಳೂರು, ದಿನಾಂಕ : 2ನೇ ಮಾರ್ಚ್, 2009**

**ಅಧಿಸೂಚನೆ – 1**

ಬೆಂಗಳೂರು ಮೆಟ್ರೋ ರೈಲು ಯೋಜನೆಗಾಗಿ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ವ್ಯಾಪ್ತಿಯಡಿ ಸ್ವಾಧೀನ ಪಡಿಸಿಕೊಳ್ಳಲು ಉದ್ದೇಶಿಸಿರುವ ಈ ಕೆಳಕಂಡ ಸ್ವತ್ತುಗಳುಳ್ಳ ಪ್ರದೇಶವನ್ನು ಕೈಗಾರಿಕಾ ಪ್ರದೇಶವೆಂದು ಘೋಷಿಸಲಾಗಿದೆ.

**ವಾರ್ಡ್ ನಂ. 76, ವಾರ್ಡ್ ಹೆಸರು : ರಿಚ್‌ಮಂಡ್ ಟೌನ್, ಸ್ಥಳದ ಹೆಸರು : ಮಿನ್ಸ್ ಚೌಕ, ಕ್ರಿಕೇಟ್ ಸ್ಟೇಡಿಯಂ ಸ್ಟೇಷನ್**

| ಕ್ರ. ಸಂ. | ಎಲ್ ಎ/ ಸಿಟಿ ಸರ್ವೆ ನಂಬರ್ | ಸ್ವತ್ತಿನ ಸ್ವರೂಪ | ಚಕ್ಕಬಂದಿ | | | | ಭೂಸ್ವಾಧೀನಕ್ಕೆ ಒಳಪಟ್ಟ ವಿಸ್ತೀರ್ಣ ಚ.ಮೀ. |
|---|---|---|---|---|---|---|---|
| | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ | |
| 1 | 2 | 3 | 4 | 5 | 6 | 7 | 8 |
| 1 | L A/91 CTS 1440 | - | ರಸ್ತೆ | ಹೆಚ್.ಎ.ಎಲ್., ಕಟ್ಟಡ | ಹೆಚ್.ಎ.ಎಲ್., ಕಟ್ಟಡ | ರಸ್ತೆ | 937.422 |
| 2 | L A 82/ CTS 1282 | ಖಾಲಿ ಜಾಗ | ರಸ್ತೆ | ಬಿ.ಎಸ್.ಎನ್.ಎಲ್., ಕಟ್ಟಡ | ಉಳಿಕೆ ಜಾಗ | ರಸ್ತೆ | 2078.933 |
| 3 | L A/77 CTS 1226 | - | ರಸ್ತೆ | ವಿಶ್ವೇಶ್ವರಯ್ಯ ಗೋಪುರ | ಉಳಿಕೆ ಜಾಗ | ರಸ್ತೆ | 9537.822 |
| 4 | L A/91 CTS 718 | ಖಾಲಿಜಾಗ | ಬಿ.ಆರ್.ವಿ ಪೆರೇಡ್ | ಉಳಿಕೆ ಜಾಗ | ಕಬ್ಬನ್ ರಸ್ತೆ | ಕ್ರಿಕೇಟ್ ಸ್ಟೇಡಿಯಂ | 3781.211 |

| | | | | | | | |
|---|---|---|---|---|---|---|---|
| 5 | L A/91 CTS 717 | ಖಾಲಿ ಜಾಗ | ಉಳಿಕೆ ಜಾಗ | ಉಳಿಕೆ ಜಾಗ | ಉಳಿಕೆ ಜಾಗ | ಉಳಿಕೆ ಜಾಗ | 3372.134 |
| 6 | L A/91 CTS 717 | ಜಾಲಿ ಜಾಗ | ಉಳಿಕೆ ಜಾಗ | ಉಳಿಕೆ ಜಾಗ | ನ್ಯೂ ಸೆಲ್ಯೂಟಿಂಗ್ ಬೇಸ್ ಗ್ರೌಂಡ್ | ಉಳಿಕೆ ಜಾಗ | 1602.904 |
| | | | | | | **ಒಟ್ಟು** | **21310.426** |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಂ. ವೀರಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ (ಕೈ.ಅ.), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

## ಅಧಿಸೂಚನೆ - 2

**1966ರ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯ್ದೆಯ ವಿಧಿ 1(3) ರಡಿ ಘೋಷಣೆ**

**ಸಂಖ್ಯೆ: ಸಿಐ 658 ಎಸ್‌ಪಿಕ್ಯೂ 2008, ಬೆಂಗಳೂರು, ದಿನಾಂಕ : 2ನೇ ಮಾರ್ಚ್, 2009**

ಬೆಂಗಳೂರು ಮೆಟ್ರೋ ರೈಲು ಯೋಜನೆಗಾಗಿ ಸ್ವಾಧೀನ ಪಡಿಸಿಕೊಳ್ಳಲು ಉದ್ದೇಶಿಸಲಾಗಿರುವ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ವ್ಯಾಪ್ತಿಯೊಳಗೆ ಬರುವ ಈ ಕೆಳಕಂಡ ಸ್ವತ್ತುಗಳಿರುವ ಪ್ರದೇಶಕ್ಕೆ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯ್ದೆ 1966ರ 7ನೇ ಅಧ್ಯಾಯವು ಈ ಅಧಿಸೂಚನೆಯು ರಾಜ್ಯ ಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ ಜಾರಿಗೆ ಬರುತ್ತದೆಂದು ಘೋಷಿಸಿದೆ.

**ವಾರ್ಡ್ ನಂ. 76, ವಾರ್ಡ್ ಹೆಸರು : ರಿಚ್‌ಮಂಡ್ ಟೌನ್, ಸ್ಥಳದ ಹೆಸರು : ಮಿನ್ಸ್ ಚೌಕ, ಕ್ರಿಕೇಟ್ ಸ್ಟೇಡಿಯಂ ಸ್ಟೇಷನ್**

| ಕ್ರ. ಸಂ. | ಎಲ್ ಎ/ ಸಿಟಿ ಸರ್ವೆ ನಂಬರ್ | ಸ್ವತ್ತಿನ ಸ್ವರೂಪ | ಚಕ್ಕಬಂದಿ | | | | ಭೂಸ್ವಾಧೀನಕ್ಕೆ ಒಳಪಟ್ಟ ವಿಸ್ತೀರ್ಣ ಚ.ಮೀ. |
|---|---|---|---|---|---|---|---|
| | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ | |
| 1 | 2 | 3 | 4 | 5 | 6 | 7 | 8 |
| 1 | L A/91 CTS 1440 | - | ರಸ್ತೆ | ಹೆಚ್.ಎ.ಎಲ್., ಕಟ್ಟಡ | ಹೆಚ್.ಎ.ಎಲ್., ಕಟ್ಟಡ | ರಸ್ತೆ | 937.422 |
| 2 | L A 82/ CTS 1282 | ಖಾಲಿ ಜಾಗ | ರಸ್ತೆ | ಬಿ.ಎಸ್.ಎನ್.ಎಲ್., ಕಟ್ಟಡ | ಉಳಿಕೆ ಜಾಗ | ರಸ್ತೆ | 2078.933 |
| 3 | L A/77 CTS 1226 | - | ರಸ್ತೆ | ವಿಶ್ವೇಶ್ವರಯ್ಯ ಗೋಪುರ | ಉಳಿಕೆ ಜಾಗ | ರಸ್ತೆ | 9537.822 |
| 4 | L A/91 CTS 718 | ಖಾಲಿಜಾಗ | ಬಿ.ಆರ್.ವಿ ಪೆರೇಡ್ | ಉಳಿಕೆ ಜಾಗ | ಕಬ್ಬನ್ ರಸ್ತೆ | ಕ್ರಿಕೇಟ್ ಸ್ಟೇಡಿಯಂ | 3781.211 |
| 5 | L A/91 CTS 717 | ಖಾಲಿ ಜಾಗ | ಉಳಿಕೆ ಜಾಗ | ಉಳಿಕೆ ಜಾಗ | ಉಳಿಕೆ ಜಾಗ | ಉಳಿಕೆ ಜಾಗ | 3372.134 |
| 6 | L A/91 CTS 717 | ಜಾಲಿ ಜಾಗ | ಉಳಿಕೆ ಜಾಗ | ಉಳಿಕೆ ಜಾಗ | ನ್ಯೂ ಸೆಲ್ಯೂಟಿಂಗ್ ಬೇಸ್ ಗ್ರೌಂಡ್ | ಉಳಿಕೆ ಜಾಗ | 1602.904 |
| | | | | | | **ಒಟ್ಟು** | **21310.426** |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಂ. ವೀರಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ (ಕೈ.ಅ.), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

## ಅಧಿಸೂಚನೆ

**1966ರ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯ್ದೆಯ ವಿಧಿ 28(1) ಮೇರೆಗೆ**

**ಸಂಖ್ಯೆ: ಸಿಐ 658 ಎಸ್‌ಪಿಕ್ಯೂ 2008, ಬೆಂಗಳೂರು, ದಿನಾಂಕ : 2ನೇ ಮಾರ್ಚ್, 2009**

ಕೆಳಕಂಡ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಸ್ವತ್ತುಗಳು ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿಯಿಂದ ಬೆಂಗಳೂರು ಮೆಟ್ರೋ ರೈಲು ಯೋಜನೆ ಅಭಿವೃದ್ಧಿ ಪಡಿಸುವ ಉದ್ದೇಶಕ್ಕಾಗಿ ಕರ್ನಾಟಕ ರಾಜ್ಯ ಸರ್ಕಾರಕ್ಕೆ ಬೇಕಾಗಿದೆ.

೧೯೬೬ರ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯ್ದೆಯ ವಿಧಿ 28(1) (೧೯೬೬ರ ೧೮ನೇ ನಂ.ಕಾಯ್ದೆಯ) ಪ್ರಕಾರ ದತ್ತವಾದ ಅಧಿಕಾರದ ಮೇರೆಗೆ ಸದರಿ ಸ್ವತ್ತುಗಳನ್ನು ಸ್ವಾಧೀನ ಪಡಿಸಿಕೊಳ್ಳುವ ಉದ್ದೇಶದಿಂದ ಈ ನೋಟೀಸು ಪ್ರಕಟಿಸಲಾಗಿದೆ.

ಮೇಲ್ಕಂಡ ಕಾಯ್ದೆಯ ವಿಧಿ ೩೫ರ ಮೇರೆಗೆ ಕೆಲಸ ನಿರ್ವಹಿಸಲು ಈ ಜಮೀನುಗಳಿಗೆ ಯಾವುದೇ ವ್ಯಕ್ತಿಯನ್ನು ತಡೆಯುವುದಾಗಲೀ ಅಥವಾ ಅಡ್ಡಿ ಪಡಿಸುವುದಾಗಲೀ ಮಾಡಕೂಡದೆಂದು ಈ ಜಮೀನುಗಳಲ್ಲಿ ಆಸಕ್ತಿ ಹೊಂದಿರುವ ಎಲ್ಲಾ ವ್ಯಕ್ತಿಗಳಿಗೂ ಈ ಮೂಲಕ ಎಚ್ಚರಿಸಲಾಗಿದೆ.

ಈ ಅಧಿಸೂಚನೆ ಪ್ರಕಟಣೆಯಾಗಿರುವ ತಾರೀಖಿನ ನಂತರ ಬೆಂಗಳೂರು ವಿಭಾಗದ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿಯ ವಿಶೇಷ ಭೂಸ್ವಾಧೀನಾಧಿಕಾರಿಯವರ ಅನುಮತಿಯಿಲ್ಲದೆ ಸದರಿ ಸ್ವತ್ತಿಗಳನ್ನು ವಿಲೆ ಮಾಡಲು ಒಪ್ಪಂದ ಕ್ರಯ, ಭೋಗ್ಯ, ಲೀಸ್, ಅದಲು-ಬದಲು ವಗೈರೆ ಮಾಡುವಂತಿಲ್ಲ ಮತ್ತು ಸದರಿ ಸ್ವತ್ತುಗಳಲ್ಲಿ ಈ ಅಧಿಸೂಚನೆ ಪ್ರಕಟಣೆ ನಂತರ ಕಟ್ಟಡಗಳ ನಿರ್ಮಾಣ ಮತ್ತಿತರ ಅಭಿವೃದ್ಧಿ ಕೆಲಸಗಳನ್ನು ಮಾಡುವಂತಿಲ್ಲ. ಒಂದು ವೇಳೆ ಮಾಡಿದರೂ 1894ರ ಭೂಸ್ವಾಧೀನ ಕಾಯ್ದೆ ವಿಧಿ (ನಿಯಮ 7) ಕರ್ನಾಟಕ ತಿದ್ದುಪಡಿ ಮಾಡಿರುವ ಕಾಯ್ದೆ 17:1961 ಮತ್ತು ೧೯೬೬ರ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯ್ದೆ ವಿಧಿ ೩೦ನ್ನು ಓದಿಕೊಳ್ಳುವ ಮೇರೆಗೆ ಪರಿಹಾರಧನ ನಿಗಧಿ ಮಾಡುವಾಗ ಈ ಅಂಶಗಳನ್ನು ಗಣನೆಗೆ ತೆಗೆದುಕೊಳ್ಳುವುದಿಲ್ಲ ಮತ್ತು ಅಂತಿಮವಾಗಿ ಸ್ವತ್ತುಗಳನ್ನು ಸ್ವಾಧೀನ ಪಡಿಸಿಕೊಳ್ಳಲಾಗುವುದು.

| ಕ್ರ. ಸಂ. | ಖಾತಾದಾರರ ಹೆಸರು | ಅನುಭವದಾರರ ಹೆಸರು | ಸ್ವತ್ತಿನ ಸ್ವರೂಪ | ಎಲ್ ಎ/ ಸಿಟಿ ಸರ್ವೆ ನಂಬರ್ | ಚಕ್ಕಬಂದಿ | | | | ಭೂಸ್ವಾಧೀನಕ್ಕೆ ಒಳಪಟ್ಟ ವಿಸ್ತೀರ್ಣ ಚ.ಮೀ. |
|---|---|---|---|---|---|---|---|---|---|
| | | | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ | |
| 1 | 2 | 3 | 4 | 5 | 7 | 8 | 9 | 10 | 11 |
| ವಾರ್ಡ್ ನಂ. 76, ವಾರ್ಡ್ ಹೆಸರು : ರಿಚ್‌ಮಂಡ್ ಟೌನ್, ಸ್ಥಳದ ಹೆಸರು : ಮಿನ್ಸ್ ಚೌಕ, ಕ್ರಿಕೇಟ್ ಸ್ಟೇಡಿಯಂ ಸ್ಟೇಷನ್ | | | | | | | | | |
| 1 | ಹೆಚ್.ಎ.ಎಲ್. | ಹೆಚ್.ಎ.ಎಲ್. | - | L A/91 CTS 1440 | ರಸ್ತೆ | ಹೆಚ್.ಎ.ಎಲ್., ಕಟ್ಟಡ | ಹೆಚ್.ಎ.ಎಲ್., ಕಟ್ಟಡ | ರಸ್ತೆ | 937.422 |
| 2 | ಬಿ.ಎಸ್.ಎನ್.ಎಲ್ | ಬಿ.ಎಸ್.ಎನ್.ಎಲ್ | ಖಾಲಿ ಜಾಗ | L A 82/ CTS 1282 | ರಸ್ತೆ | ಬಿ.ಎಸ್.ಎನ್.ಎಲ್., ಕಟ್ಟಡ | ಉಳಿಕೆ ಜಾಗ | ರಸ್ತೆ | 2078.933 |
| 3 | ಮಹಮ್ಮದ್ ಮೂಸಾ ಸೇಟ್ ವಕ್ಫ್ ಆಸ್ತಿ | ಮಹಮ್ಮದ್ ಮೂಸಾ ಸೇಟ್ ವಕ್ಫ್ ಆಸ್ತಿ | - | L A/77 CTS 1226 | ರಸ್ತೆ | ವಿಶ್ವೇಶ್ವರಯ್ಯ ಗೋಪುರ | ಉಳಿಕೆ ಜಾಗ | ರಸ್ತೆ | 9537.822 |
| 4 | ಕಾರ್ಯದರ್ಶಿಗಳು ಚಿನ್ನಸ್ವಾಮಿ ಕ್ರಿಕೇಟ್ ಸ್ಟೇಡಿಯಂ | ಕಾರ್ಯದರ್ಶಿಗಳು ಚಿನ್ನಸ್ವಾಮಿ ಕ್ರಿಕೇಟ್ ಸ್ಟೇಡಿಯಂ | ಖಾಲಿಜಾಗ | L A/91 CTS 718 | ಬಿ.ಆರ್.ವಿ ಪೆರೇಡ್ | ಉಳಿಕೆ ಜಾಗ | ಕಬ್ಬನ್ ರಸ್ತೆ | ಕ್ರಿಕೇಟ್ ಸ್ಟೇಡಿಯಂ | 3781.211 |
| 5 | ನ್ಯೂ ಸೆಲ್ಯೂಟಿಂಗ್ ಬೇಸ್ ಗ್ರೌಂಡ್ | ನ್ಯೂ ಸೆಲ್ಯೂಟಿಂಗ್ ಬೇಸ್ ಗ್ರೌಂಡ್ | ಖಾಲಿ ಜಾಗ | L A/91 CTS 717 | ಉಳಿಕೆ ಜಾಗ | ಉಳಿಕೆ ಜಾಗ | ಉಳಿಕೆ ಜಾಗ | ಉಳಿಕೆ ಜಾಗ | 3372.134 |
| 6 | ಪೋಲೀಸ್ ಸೂಪರಿಂಡೆಂಟ್ ಕ್ಯಾಂಪಸ್ | ಪೋಲೀಸ್ ಸೂಪರಿಂಡೆಂಟ್ ಕ್ಯಾಂಪಸ್ | ಖಾಲಿ ಜಾಗ | L A/91 CTS 717 | ಉಳಿಕೆ ಜಾಗ | ಉಳಿಕೆ ಜಾಗ | ನ್ಯೂ ಸೆಲ್ಯೂಟಿಂಗ್ ಬೇಸ್ ಗ್ರೌಂಡ್ | ಉಳಿಕೆ ಜಾಗ | 1602.904 |
| | | | | | | | | **ಒಟ್ಟು** | **21310.426** |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಂ. ವೀರಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ (ಕೈ.ಅ.), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

**ಸರ್ಕಾರಿ ಮುದ್ರಣಾಲಯ, ಬೆಂಗಳೂರು.**